


೩೮೩

# ಪಂಚಾಯತ ಆಡಳಿತ: ಸಾಧಕ ಭಾಧಕಗಳು

ವಸಂತ ಪಾಟೀಲ



ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಅಗಸ್ಟ, ೧೯೮೮

ಉಪನ್ಯಾಸ ಗ್ರಂಥಮಾಲೆ

೩೮೬

# ಪಂಚಾಯತ ಆಡಳಿತ: ಸಾಧಕ ಬಾಧಕಗಳು

ವಸಂತ ಪಾಟೀಲ



ಪ್ರಸಾರಾಂಗ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಅಗಸ್ಟ್, ೧೯೮೮

ಪ್ರಕಾಶಕರು:
ಎಸ್. ಬಿ. ನಾಯಕ
ನಿರ್ದೇಶಕರು
ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಥಮ ಮುದ್ರಣ: ಅಗಸ್ಟ್, ೧೯೮೮
೫೦೦೦ ಪ್ರತಿಗಳು



ಬೆಲೆ: ರೂ. ೧=೦೦

ಮುದ್ರಕರು :
ಜಿ. ಬಿ. ಮನ್ನಾಚಾರ
ಕಾರ್ಯನಿರ್ವಾಹಕ ನಿರ್ದೇಶಕರು
ಕರ್ನಾಟಕ ವಿಶ್ವವಿದ್ಯಾಲಯ ಮುದ್ರಣಾಲಯ
ಧಾರವಾಡ

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ಪ್ರಸಾರಾಂಗದ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ. ಜನಪ್ರಿಯವೂ ಆಗಿರುವುದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ನಾಲ್ಕು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು ಶಾಸ್ತ್ರಸಮ್ಮತವಾದ ಸರಣಿಯಲ್ಲಿ ಜನಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನಭಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆ ಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ, ಪ್ರೋತ್ಸಾಹವೂ ದೊರೆಯುತ್ತಿದೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವದಲ್ಲದೆ ಎಂತಹ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನವಿುಟ್ಟು ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೩೮೫ ಪುಸ್ತಿಕೆಗಳು ಪ್ರಕಟ ವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಿಕೆಗಳು ನಾಲ್ಕು-ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
೧-೮-೧೯೭೮

**ಜಿ. ಕೆ. ನಾರಾಯಣ ರೆಡ್ಡಿ**
ಕುಲಪತಿಗಳು

# ಮೊದಲ ಮಾತು

ಪಂಚಾಯತ ಆಡಳಿತವು ಭಾರತದ ಇತಿಹಾಸದುದ್ದಕ್ಕೂ ಹಾಸುಹೊಕ್ಕಾಗಿದೆ. ಇದು ಕೇವಲ ಆಡಳಿತವಲ್ಲ. ಇದರಲ್ಲಿ ಭಾರತದ ಸಂಸ್ಕೃತಿ, ಪರಂಪರೆ, ನೀತಿ, ನಿಯಮಗಳು ಅಡಕ ವಾಗಿವೆ. ಪ್ರಾಚೀನ ಪಂಚಾಯತವು "ಪಂಚಪರಮೇಶ್ವರ" ಎಂಬ ರೀತಿಯಲ್ಲಿ ತನ್ನ ಸ್ಥಾನಮಾನವನ್ನು ಹೊಂದಿತ್ತು. ಮಧ್ಯಕಾಲ ದಲ್ಲಿ ಪರಕೀಯರ ಆಡಳಿತದಲ್ಲಿ ಗುಪ್ತಗಾಮಿನಿಯಂತಿದ್ದಿತು. ಸದ್ಯದಲ್ಲಿ ಇದು ರಾಜಕಾರಣದ ಸುಳಿಯಲ್ಲಿ ಸಿಗದಂತೆ ನೋಡಿ ಕೊಳ್ಳುವುದು ಎಲ್ಲರ ಕರ್ತವ್ಯ.

ಮಹಾತ್ಮಾ ಗಾಂಧಿ ಹಾಗೂ ಜಯಪ್ರಕಾಶ ನಾರಾಯಣರು ಪಂಚಾಯತ ಆಡಳಿತದ ಮಹತ್ವವನ್ನು ಅರಿತಿದ್ದರು. ಗ್ರಾಮ ದಾಡಳಿತ ರಾಷ್ಟ್ರದಾಡಳಿತದ ಅಡಿಪಾಯ. ಗ್ರಾಮರಾಜ್ಯದಿಂದ ರಾಮರಾಜ್ಯದ ಕನಸು ನನಸಾಗಬೇಕಾಗಿದೆ. ಗ್ರಾಮಸಭೆಯಿಂದ ಲೋಕಸಭೆಯ ಕಡೆಗೆ ಆಡಳಿತ ವಾಹಿನಿ ಹರಿಯಬೇಕಾಗಿದೆ. ಭಾರತ ಗ್ರಾಮಗಳ ನಾಡು. ಈ ಹಳ್ಳಿಗಳು ಉದ್ಧಾರವಾದರೆ ಇಡೀ ದೇಶವೇ ಉದ್ಧಾರವಾದಂತೆ. ಪಂಚಾಯತ ಆಡಳಿತವು ಹಳ್ಳಿಗಳ ಅಭಿವೃದ್ಧಿಯತ್ತ ಗುರಿಯನ್ನಿಟ್ಟಿದೆ. ಸ್ಥಾನಿಕ ಸಮಸೆ ಗಳು ಸ್ಥಾನಿಕವಾಗಿ ಸ್ಥಾನಿಕ ಮುಖಂಡರಿಂದ ಆದಷ್ಟು ಬೇಗ್ಗೆ ಪರಿಹಾರ ಕಂಡುಕೊಳ್ಳಬೇಕಾಗಿದೆ.

ಪಂಚಾಯತವು ಗಾಂಧಿವಾದದ ಒಂದು ಅಂಗ. ಇದನು ಭಾರತದ ಸಂವಿಧಾನವೂ ಪುಷ್ಟೀಕರಿಸಿದೆ. ಪ್ರಥಮ ಪ್ರಧಾನಿ

ಪಂ. ಜವಾಹರಲಾಲ ನೆಹರೂರವರು ಬಳವಂತರಾಯ ಮೆಹ್ತಾರವರ ವರದಿಯನ್ನು ಆಧರಿಸಿ ಪಂಚಾಯತ ರಾಜ್ಯವನ್ನು ದೇಶದುದ್ದಗಲಕ್ಕೂ ಹರಡಿದರು. ಸಮುದಾಯ ದೇಳ್ಗೆಯ ಗುರಿಯನ್ನು ಅದರ ಮುಂದೆ ಆದರ್ಶವನ್ನಾಗಿಟ್ಟರು. ಇದರ ಕಾರ್ಯಚಟುವಟಿಕೆಗಳನ್ನು ಅಭ್ಯಸಿಸಿ ತನ್ನ ವರದಿಯನ್ನು ಒಪ್ಪಿಸಲು ಕೇಂದ್ರದ ಆಗಿನ ಜನತಾ ಸರಕಾರವು ಅಶೋಕ ಮೆಹ್ತಾ ಸಮಿತಿಯನ್ನು ನೇಮಿಸಿತು. ಇದರ ವರದಿಯನ್ನು ಆಧರಿಸಿ ಕರ್ನಾಟಕದ ಜನತಾ ಸರಕಾರವು ಮಂಡಲ ಪಂಚಾಯತ ಹಾಗೂ ಜಿಲ್ಲಾ ಪರಿಷತ್ತಿನ ಹೊಸ ವಿಧೇಯಕವನ್ನು ಜಾರಿಯಲ್ಲಿ ತಂದು ಈಗಾಗಲೇ ಅವಕ್ಕೆ ಪ್ರಥಮ ಚುನಾವಣೆಯನ್ನು ಏರ್ಪಡಿಸಿತು. ಕರ್ನಾಟಕದ ಪಂಚಾಯತ ಆಡಳಿತದಲ್ಲಿ ಇದೊಂದು ಹೊಸ ಅಧ್ಯಾಯ.

ಇಲ್ಲಿ ಪಂಚಾಯತ ಆಡಳಿತದ ಪ್ರಸ್ತಾವನೆಯನ್ನು ಮಾಡಿ, ಕೆಲ ಶಬ್ದಗಳ ವಿಂಗಡಣೆ ಹಾಗೂ ಅವುಗಳ ಅರ್ಥಗಳನ್ನು ನೀಡಿ, ಅದರ ಐತಿಹಾಸಿಕ ಹಿನ್ನಲೆ ಹಾಗೂ ಧ್ಯೇಯೋದ್ದೇಶ ಗಳನ್ನು ಗುರುತಿಸಲಾಗಿದೆ. ಬಳವಂತರಾಯ ಮೆಹ್ತಾ ವರದಿ ಯನ್ನಾಧರಿಸಿದ ಪಂಚಾಯತ ರಾಜ್ಯದ ಸಂಘಟನೆಯನ್ನು ಪರಿ ಚಯಿಸಿ, ಅಶೋಕ ಮೆಹ್ತಾ ವರದಿಯನ್ನಾಧರಿಸಿದ ಕರ್ನಾಟಕದ ಮಂಡಲ ಪಂಚಾಯತ ಮತ್ತು ಜಿಲ್ಲಾ ಪರಿಷತ್ತಿನ ವಿವರಗಳನ್ನು ನೀಡಿದೆ. ಈ ಆಡಳಿತದ ಸಾಧಕ, ಬಾಧಕಗಳನ್ನು ಗಮನಿಸಿ ಕೆಲ ಸೂಚನೆಗಳನ್ನು ಸಹ ಕೊಟ್ಟಿದೆ.

ಕರ್ನಾಟಕ ವಿಶ್ವವಿದ್ಯಾಲಯವು ಏರ್ಪಡಿಸಿದ ಉಪನ್ಯಾಸ ಮಾಲೆಯಲ್ಲಿ ಮುಂಡರಗಿ ತಾಲೂಕಿನ ಹಮ್ಮಿಗಿಯಲ್ಲಿ ಮತ್ತು ರೋಣ ತಾಲೂಕಿನ ಇಟಗಿಯಲ್ಲಿ ನಾನಿತ್ತ ಉಪನ್ಯಾಸವು ಇಂದಿನ ವರೆಗಿನ ಬೆಳವಣಿಗೆಗಳನ್ನು ಅರಗಿಸಿಕೊಂಡು ಈ ಗ್ರಂಥ ರೂಪ ತಾಳಿದೆ. ಈ ಕಾರ್ಯಕ್ಕೆ ನೆರವು ನೀಡಿದ ವಿಶ್ವವಿದ್ಯಾಲಯದ ಎಲ್ಲ ಅಧಿಕಾರ ವರ್ಗಕ್ಕೆ ನಾನು ಚಿರಋಣಿಯಾಗಿರುವೆ. ಮುಖ್ಯ ವಾಗಿ ಪ್ರೊ. ಎ.ಎಂ. ರಾಜಶೇಖರಯ್ಯ, ಡಾ. ಎಸ್.ಎ. ಪಾಟೀಲ, ಶ್ರೀ ಎಸ್. ಬಿ. ನಾಯಕ ಹಾಗೂ ಶ್ರೀ ಎಲ್. ಎಂ. ಗುಡ್ಡಿನರ ವರಿಗೆ ನನ್ನ ಕೃತಜ್ಞತೆಗಳು.

ರಾಜ್ಯಶಾಸ್ತ್ರ ವಿಭಾಗ
ಕ. ವಿ. ವಿ., ಧಾರವಾಡ
೨೦-೧-೧೯೮೭

**ವಸಂತ ಪಾಟೀಲ**

# ಪರಿವಿಡಿ


ಮುನ್ನುಡಿ ... iii
ಮೊದಲ ಮಾತು ... v
೧ ಪ್ರಸ್ತಾವನೆ ... ೧
೨ ಶಾಬ್ದಿಕ ವಿಂಗಡಣೆ ಹಾಗೂ ಅವುಗಳ ಅರ್ಥ ... ೧೦
೩ ಪಂಚಾಯತ ಆಡಳಿತದ ಐತಿಹಾಸಿಕ ಹಿನ್ನೆಲೆ ... ೨೨
೪ ಧ್ಯೇಯೋದ್ದೇಶಗಳು ... ೩೩
೫ ಸಂಘಟನೆ (ಬಳವಂತರಾಯ ವರದಿಯ ಪ್ರಕಾರ) .... ೩೯
೬ ಮಂಡಲ ಪಂಚಾಯತ ಮತ್ತು ಜಿಲ್ಲಾ ಪರಿಷತ್ತು ... ೪೮
೭ ಪಂಚಾಯತ ಆಡಳಿತದ ಸಾಧಕ ಬಾಧಕಗಳು ... ೬೬
೮ ಅನುಬಂಧಗಳು ೧ ರಿಂದ ೬ ... ೭೨

# ೧. ಪ್ರಸ್ತಾವನೆ

ಪಂಚಾಯತ ಆಡಳಿತವು ಭಾರತದ ಇತಿಹಾಸದುದ್ದಕ್ಕೂ ತನ್ನದೇ ಆದ ವಿಶಿಷ್ಟತೆಯನ್ನು, ಪರಂಪರೆಯನ್ನು ಕಾಯ್ದು ಕೊಂಡು ಬಂದಿದೆ. ಜಾಗತಿಕ ಆಡಳಿತಕ್ಕೇ ಪಂಚಾಯತ ಆಡಳಿತವು ಭಾರತದ ವಿಶಿಷ್ಟವಾದ ಕೊಡುಗೆ- ಎಂದು ಹೇಳಿದರೆ ಅದರಲ್ಲಿ ಅತಿಶಯೋಕ್ತಿ ಇರಲಾರದು. ಜಗತ್ತಿನ ಇತಿಹಾಸವೇ ಎತ್ತಿ ಹೇಳುವಂತೆ, ವಿಸ್ತೃತವಾಗಿ ಅತಿ ಪ್ರಾಚೀನವಾದ ಸಂಸ್ಕೃತಿಯನ್ನು ಹೊಂದಿದಂಥ ದೇಶಗಳು ಕೇವಲ ಕೆಲವು ಮಾತ್ರ. ಉದಾಹರಣೆಗೆ ಇಜಿಪ್ತ, ಬೆಬಿಲೋನಿಯಾ, ಮೆಸೊಪೊಟೇಮಿಯಾ, ಭಾರತ, ಚೀನ ಮುಂತಾದವುಗಳು. ಮೊದಲಿನ ಮೂರೂ ದೇಶಗಳು ಸದ್ಯದ ಮಧ್ಯ ಏಶಿಯಾ ಭಾಗದಲ್ಲಿ ಬರುವವು. ಭಾರತ ಆಗ್ನೇಯ ಏಶಿಯಾದಲ್ಲಿಯೂ ಹಾಗೂ ಚೀನವು ಪೂರ್ವ ಏಶಿಯಾದಲ್ಲಿಯೂ ಬರುವವು. ಈ ರೀತಿ

ಭೌಗೋಲಿಕವಾಗಿ ಸ್ವಲ್ಪಮಟ್ಟಿಗೆ ಪ್ರಾಚೀನ ಉಚ್ಛ್ರಾಯ ಸಂಸ್ಕೃತಿಗಳಲ್ಲಿ ಭಾರತವು ಮಧ್ಯವರ್ತಿಯಾಗಿತ್ತಷ್ಟೇ ಅಲ್ಲ, ಅವೆಲ್ಲವುಗಳಲ್ಲಿ ಶ್ರೇಷ್ಠತೆಯನ್ನೂ ಪಡೆದಿತ್ತೆಂಬುದರಲ್ಲಿ ಸಂಶಯವಿಲ್ಲ. ಭಾರತದ ಸಂಪತ್ತು, ಧರ್ಮ, ದೇವತೆಗಳು, ನಾಲಂದಾ, ತಕ್ಷಶಿಲಾದಂಥ ಜಗದ್ವಿಖ್ಯಾತ ವಿಶ್ವವಿದ್ಯಾಲಯಗಳು, ವೇದ, ಉಪನಿಷತ್ತು, ಆರಣ್ಯಕಗಳು, ರಾಮಾಯಣ, ಮಹಾಭಾರತ, ಅರ್ಥಶಾಸ್ತ್ರ ಮುಂತಾದ ಜಾಗತಿಕ ಮೌಲ್ಯಗಳನ್ನು ಪಡೆದ ಗ್ರಂಥಗಳು ಹಾಗೂ ಬುದ್ಧ, ಮಹಾವೀರ, ಮುಂತಾದ ಧರ್ಮ ಸಂಸ್ಥಾಪಕರು ಜಗತ್ತನ್ನೇ ಭಾರತದತ್ತ ಆಕರ್ಷಿಸುವಲ್ಲಿ ಸಂಶಯವಿಲ್ಲ. ಆ ಕಾರಣದಿಂದಲೇ ಪ್ರಾಚೀನ ಕಾಲದಲ್ಲಿಯೇ ಪಾಶ್ಚಿಮಾತ್ಯ ಗ್ರೀಕರು ಹಾಗೂ ಪೂರ್ವದ ಚೀನರು ಮುಂತಾದವರೆಲ್ಲರೂ ಒಂದಿಲ್ಲೊಂದು ಧ್ಯೇಯೋದ್ದೇಶವನ್ನಿಟ್ಟುಕೊಂಡು ಭಾರತಕ್ಕೆ ಬಂದುದೇ ಇದಕ್ಕೆ ಸಾಕ್ಷಿ. ಸುಮಾರು ೨೦೦೦ ವರ್ಷ ಕ್ರಿ. ಶ. ಪೂರ್ವದಲ್ಲಿಯೇ ಉತ್ತರ ಏಷಿಯಾ ಭಾಗದಿಂದ ಆರ್ಯರು ಭಾರತಕ್ಕೆ ಬರಬೇಕಾದರೆ ಆಗಿದ್ದ ದ್ರಾವಿಡ ಸಂಸ್ಕೃತಿಯು (ಕ್ರಿ. ಶ. ಪೂ. ೫೦೦೦ ವರ್ಷದಿಂದೀಚೆ) ಹಿರಿಮೆಯನ್ನು ತೋರಿಸುವುದು. ಇಷ್ಟೊಂದು ಪ್ರಾಚೀನತೆ, ಶ್ರೇಷ್ಠ ಸಂಸ್ಕೃತಿಯನ್ನು ಹೊಂದಿದ ದೇಶ ಪ್ರಾಚೀನ ಕಾಲದಿಂದಲೂ ಅವ್ಯಾಹತವಾಗಿ ಪರದೇಶಿಯರನ್ನು ಆಕರ್ಷಿಸುವಲ್ಲಿ ಅಚ್ಚರಿಯೇನಿಲ್ಲ.

ಗ್ರೀಕ ತತ್ತ್ವಜ್ಞಾನಿಗಳಾದ ಸಾಕ್ರೆಟಿಸ್ (ಕ್ರಿ.ಪೂ. ೪೬೯–೩೯೯), ಪ್ಲೇಟೋ (ಕ್ರಿ. ಪೂ. ೪೨೭–೩೪೭) ಮತ್ತು ಅರಿ

ಸ್ಟಾಟಲರು (ಕ್ರಿ. ಪೂ. ೩೮೪–೩೨೨) ರಾಜ್ಯಶಾಸ್ತ್ರ ಪ್ರವರ್ತಕರೆಂದು ಪಾಶ್ಚಿಮಾತ್ಯ ಸಾಹಿತ್ಯದಲ್ಲಿ ಬಿರುದನ್ನು ಪಡೆದಿರುವರು. ಅವರಿಗಿಂತ ಪೂರ್ವದಲ್ಲಿ ಗ್ರೀಕ ಸೋಫಿಸ್ಟರು. ಪೈಥಾಗೊರಾಸ್ (ಕ್ರಿ. ಶ. ಪೂ. ೬ನೆಯ ಶತಮಾನ) ಹೋಮರ (ಕ್ರಿ.ಶ. ಪೂ. ೧೦ನೆಯ ಶತಮಾನ) ತತ್ತ್ವಜ್ಞಾನಿ ಕವಿಗಳು ಭಾರತದ ಸಂಸ್ಕೃತಿ ಹಾಗೂ ಸಾಹಿತ್ಯದಿಂದಲೇ ಪ್ರಭಾವಿತರಾದವರೆಂದಮೇಲೆ, ಭಾರತದ ಆಡಳಿತ, ಸಂಸ್ಕೃತಿ ಹಾಗೂ ಸಾಹಿತ್ಯದ ನಿಜ ಪರಿಚಯ ವಾಗುವದು. ಪಾಶ್ಚಿಮಾತ್ಯದ ಈಗಿನ ಪ್ರಚಾರ ಹಾಗೂ ಜಾಹಿರಾತಿನ ಕಲೆ ಭಾರತಕ್ಕೂ ಅಂಟಿದ್ದರೆ ಭಾರತದ ಶ್ರೇಷ್ಠತೆಯು ಅರಿವು ಜಗತ್ತಿಗೇ ಮನದಟ್ಟಾಗುತ್ತಿತ್ತು.

ಸಿಂಧೂ ನದಿಯ ದಡದಲ್ಲಿಯ ಹರಪ್ಪಾ, ಮೊಹೆಂಜೋದಾರೋಗಳಲ್ಲಿಯ ಉತ್ಖನನದಲ್ಲಿ ದೊರಬಂದ ಅವಶೇಷಗಳ ಪ್ರಕಾರ ಕ್ರಿ. ಶ. ಪೂ. ೫೦೦೦ ವರ್ಷಗಳ ಪೂರ್ವದಲ್ಲಿಯೇ ನಗರಗಳು ಯೋಜನಾಬದ್ಧವಾಗಿ ಕಟ್ಟಲ್ಪಟ್ಟು ತಮ್ಮ ಸಂಸ್ಕೃತಿಯನ್ನು, ಪರಂಪರೆಯನ್ನು ಮೆರೆದ ವಿಷಯ ಮನದಟ್ಟಾಗುವುದು. ಇದು ಆಗಿನ ಗ್ರಾಮ ಅಥವಾ ನಗರಾಡಳಿತದ ವೈಖರಿಯನ್ನು ಎತ್ತಿ ತೋರಿಸುವುದು. ಗ್ರೀಸದ ಅತಿ ಇತ್ತೀಚಿನ (ಕ್ರಿ. ಶ. ಪೂ. ೬–೭ನೆಯ ಶತಮಾನ) ನಗರ ರಾಜ್ಯಗಳಾದ ಅಥೆನ್ಸ್, ಸ್ಪಾರ್ಟಾ, ಕಾರ್ಥೇಜ್, ಕ್ರೀಟ್ ಮುಂತಾದವು ಪಾಶ್ಚಿಮಾತ್ಯ ಸಾಹಿತ್ಯದಲ್ಲಿ ಪ್ರಚಾರ, ಪ್ರಸಿದ್ಧಿ ಪಡೆದಿರುವವು; ತದನಂತರ ಇಟಲಿಯ ರೋಮ ಹಾಗೂ ಯುರೋಪದ ಪಟ್ಟಣಗಳು ಪ್ರಚಾರಕ್ಕೆ ಬಂದಿರುವವು.

ಒಟ್ಟಿನಲ್ಲಿ ಭಾರತವು ಜಗತ್ತಿನಲ್ಲಿಯೇ ಅತೀ ಪ್ರಾಚೀನತೆಯನ್ನು, ಸಂಸ್ಕೃತಿಯನ್ನು. ಆಡಳಿತೆಯನ್ನು ಹೊಂದಿತ್ತು ಎನ್ನುವುದರಲ್ಲಿ ಸಂಶಯವಿಲ್ಲ. ಜಗತ್ತಿನ ಮೇಲೆ ಅದು ಪ್ರಭಾವ ಬೀರಿದರೂ ಪ್ರಚಾರ ಮಾಧ್ಯಮದ ಕೊರತೆಯಿಂದ ಮಾತ್ರ ಅದು ಹಿಂದೆ ಬಿದ್ದಿರಲು ಸಾಕು. ಕೇವಲ ಪ್ರಚಾರದ ಮೇಲಿಂದ ಒಂದು ದೇಶದ ಇತಿಹಾಸ. ಸಂಸ್ಕೃತಿ ಹಾಗೂ ಪರಂಪರೆಯನ್ನು ಅಳೆಯುವುದು ತಪ್ಪು.

ಭಾರತವು ಪ್ರಾಚೀನ ಕಾಲದಿಂದಲೂ ಹಳ್ಳಿಗಳ ನಾಡು.[೧] ಆ ಕಾರಣದಿಂದ ಆಡಳಿತದಲ್ಲಿ ಹಳ್ಳಿಗಳು ಪ್ರಾಮುಖ್ಯತೆ ಪಡೆದಿದ್ದವು. ಆಡಳಿತಗಾರರು ಹಳ್ಳಿಗಳನ್ನು ಆಧಾರವನ್ನಾಗಿಟ್ಟು ಕೊಂಡು ತಮ್ಮ ಆಡಳಿತವನ್ನು ನಡೆಸಿದ್ದುದು ಸ್ವಾಭಾವಿಕ ಹಾಗೂ ಸ್ತುತ್ಯ. ಪ್ರಾಚೀನ ಕಾಲದಿಂದ ಇತ್ತೀಚಿನ ಬ್ರಿಟಿಷರ ಆಳ್ವಿಕೆಯ ಪ್ರಾರಂಭದವರೆಗೆ ಭಾರತದಲ್ಲಿ ಅರಸು ಪ್ರಭುತ್ವದ ಆಡಳಿತವಿತ್ತು. ಈ ಅವಧಿಯಲ್ಲಿ ಭಾರತದ ಉದ್ದಗಲಕ್ಕೂ ಅಲ್ಲಲ್ಲಿ ಹಳ್ಳಿಗಳು ತಮ್ಮ ಸಂಸ್ಕೃತಿಯನ್ನು ಮೆರೆದಿರುವವು. ಈ ಅವಧಿಯಲ್ಲಿ ಭಾರತದಲ್ಲಿ ಶಹರ ಅಥವಾ ಪಟ್ಟಣಗಳು ವಿರಳವೆಂದೇ ಹೇಳಬೇಕು. ರಾಜನ ಖಾಯಂ ವಾಸಸ್ಥಾನ. ಅಥವಾ ಆತನ ಅರಮನೆ ಇದ್ದ ಸ್ಥಾನ. ಆತನ ಆಡಳಿತದ ಕೇಂದ್ರಸ್ಥಾನವಾಗಿ. ರಾಜಧಾನಿಯಾಗಿ ಬೆಳೆದವು. ಬ್ರಿಟಿಷರ ಆಳ್ವಿಕೆಯ

---

೧ ಡಾ. ಎ. ಎಸ್. ಅಲ್ತೇಕರ. —State and Government in Ancient India. ಮೂರನೆಯ ಪರಿಷ್ಕೃತ ಪ್ರತಿ. ೧೯೫೮. ಪುನರ್ಮುದ್ರಣ ೧೯೭೨.

ಪೂರ್ವದಲ್ಲಿ ಭಾರತದಲ್ಲಿ ಕೇವಲ ಹಳ್ಳಿಗಳಿದ್ದವು; ಆಗಿನ ಅರಸರ ರಾಜಧಾನಿಗಳಷ್ಟೇ ಪಟ್ಟಣಗಳೆನಿಸಿದ್ದವು.[1] ಶಹರ, ಪಟ್ಟಣ ಎಂಬ ಶಬ್ದಗಳು ಹಾಗೂ ಅವಕ್ಕೆ ಸಂಬಂಧಿಸಿದ ವಿಚಾರಗಳು ಭಾರತದ ಇತಿಹಾಸದಲ್ಲಿ ಇತ್ತೀಚಿನವು. ಒಂದು ರೀತಿಯಲ್ಲಿ ಅವು ಬ್ರಿಟಿಷರ ಕೊಡುಗೆಗಳು. ಬ್ರಿಟಿಷರ ಆಡಳಿತವು ಹಳ್ಳಿ, ಪಟ್ಟಣಗಳ ಮಧ್ಯದಲ್ಲಿ ಹೆಚ್ಚು ಭಿನ್ನತೆಯನ್ನುಂಟು ಮಾಡಿತು.

ಶಿಕ್ಷಣ, ಪ್ರಚಾರ ಮಾಧ್ಯಮ, ಸಂಸ್ಕೃತಿ, ಆಡಳಿತ ಕೇಂದ್ರ, ವಾಣಿಜ್ಯ ಕೇಂದ್ರ, ಉದ್ಯಮ ಕೇಂದ್ರ, ನೀರು, ಬೆಳಕಿನ ಸರಬರಾಜು, ಶೌಚಕೂಪದ ವ್ಯವಸ್ಥೆ— ಎಂದು ಮುಂತಾಗಿ—ಪಟ್ಟಣಗಳು ಸುಧಾರಿಸಿದವು. ಶ್ರೇಷ್ಠವು ಎನ್ನುವ ರೀತಿಯಲ್ಲಿ ಪಟ್ಟಣಗಳು ಭರದಿಂದ ಬೆಳೆದರೆ, ತದ್ವಿರುದ್ಧವಾಗಿ ಯಾವ ಹೊಸತನದ ಗಾಳಿಯೂ ಸೋಂಕದ ಕತ್ತಲೆಯ ಕೊಂಪೆಗಳಾಗಿ ಹಳ್ಳಿಗಳು ಹಿಂದೆ ಬಿದ್ದವು. ಹಿಂದಿನ ಪ್ರಸಿದ್ಧ ರಾಜಧಾನಿಗಳೆಷ್ಟೋ ಆಧುನಿಕತೆಯ ಬ್ರಿಟಿಷರಾಳ್ವಿಕೆಯ ಪರಿಣಾಮವಾಗಿ ಹಳ್ಳಿಗಳ ಮಟ್ಟಕ್ಕಿಳಿದಿರುವುದು ಕಂಡು ಬರುವುದು. ಉದಾಹರಣೆಗೆ ಕರ್ನಾಟಕದಲ್ಲಿ ಹಿಂದೆ ವಿಜಯನಗರದರಸರ ರಾಜಧಾನಿಯಾಗಿದ್ದ, ಮುತ್ತು

---

[1] ವ್ಹಿ. ಎಸ್. ಪಾಟೀಲ, —"Local Self-Government in Karnataka with special reference to Urban Problems," The Journal of Karnatak University, Social Sciences, Vol. XIV, 1978, pp.58–60.

ರತ್ನಗಳನ್ನು ಪೇಟೆಯಲ್ಲಿಟ್ಟು ಮಾರಾಟ ಮಾಡುತ್ತಿದ್ದ ಹಾಗೂ ಇಬ್ನ್ ಬತೂತಾ. ನಿಕೋಲೊ ಕೊಂಟಿ ಮುಂತಾದ ಪರದೇಶದ ಪಂಡಿತೋತ್ತಮರು ಭೆಟ್ಟಿಕೊಟ್ಟಂಥ ಹಂಪಿಯು ಇಂದು ಕೊಂಪೆ. ಹೈದರಾಲಿ. ಟಿಪ್ಪೂ ಸುಲ್ತಾನರ ರಾಜಧಾನಿ ಶ್ರೀರಂಗಪಟ್ಟಣವೂ ಹಳ್ಳಿಯೇ. ಹಿಂದೆ ಅದು ಫ್ರಾನ್ಸದ ನೆಪೋಲಿಯನ್ ಬೋನಾಪಾರ್ಟನೊಂದಿಗೆ ರಾಜತಾಂತ್ರಿಕ ಸಂಬಂಧವನ್ನು ಹೊಂದಿತ್ತು—ಬ್ರಿಟಿಷರನ್ನು ಹಿಮ್ಮೆಟ್ಟಿಸಲು. ರಾಷ್ಟ್ರಕೂಟರ ರಾಜಧಾನಿಗಳು. ಶಿಲ್ಪಕಲೆಯ ತವರೂರುಗಳಾದ ಹಳೇಬೀಡು. ಬೇಲೂರುಗಳು ಇಂದು ಹಳ್ಳಿಗಳು. ಉತ್ತರದ ಅರಸು ಹರ್ಷವರ್ಧನನ್ನು ನರ್ಮದಾ ನದಿಯ ದಂಡೆಯ ಮೇಲೆ ಸೋಲಿಸಿದ ದಕ್ಷಿಣ ಭಾರತದ ಅರಸು ವೀರ ಪುಲಿಕೇಶಿಯ ರಾಜಧಾನಿ ಬಾದಾಮಿ– ಈಗ ತಾಲೂಕು ಪಟ್ಟಣವನ್ನು ಗಿಟ್ಟಿಸಿದ್ದೇ ದೊಡ್ಡದು. ಅದರೂ ಅದರ ಸುತ್ತಲಿನ ಐಹೊಳೆ. ಪಟ್ಟದಕಲ್ಲು ಚಿಕ್ಕ ಹಳ್ಳಿಗಳು. ಬ್ರಿಟಿಷರ ವಿರುದ್ಧ ಸ್ವಾತಂತ್ರ್ಯದ ಪ್ರಥಮ ಕಹಳೆ ಊದಿದ ಮಹಿಳೆ ರಾಣಿ ಚೆನ್ನಮ್ಮನ ಕಿತ್ತೂರು ಹಳ್ಳಿ ಮಾತ್ರ. ಕದಂಬರ ಬನವಾಸಿ. ಚಾಲುಕ್ಯರ ಕಲ್ಯಾಣಗಳು ಇಂದು ಹಳ್ಳಿಗಳು.

ಈ ಎಲ್ಲ ಆಡಳಿತದ ಮಾರ್ಪಾಟಿಗೆ ಮೂಲ ಕಾರಣ ಬ್ರಿಟಿಷರ ಆಡಳಿತ ವಿಧಾನ ಹಾಗೂ ಆಧುನಿಕತೆ. ೧೮೫೭ರಲ್ಲಿ ಭಾರತದ ಮಹಾಕ್ರಾಂತಿಯು. ಬ್ರಿಟಿಷರ ದೃಷ್ಟಿಯಲ್ಲಿ ಸಿಪಾಯಿಗಳ ದಂಗೆ ಹಾಗೂ ಭಾರತೀಯರ ದೃಷ್ಟಿಯಲ್ಲಿ ಭಾರತದ

ಪ್ರಥಮ ಸ್ವಾತಂತ್ರ್ಯದ ಚಳುವಳಿ ಎನಿಸಿ, ಭಾರತದ ಆಡಳಿತಕ್ಕೆ ಹೊಸ ತಿರುವು ನೀಡಿತು. ಕ್ರಿ. ಶ. ೧೬೦೦ರಲ್ಲಿ ಸ್ಥಾಪನೆಗೊಂಡು, ವ್ಯಾಪಾರ ತದನಂತರ ರಾಜಕಾರಣಕ್ಕೆ ಇಳಿದ ಈಸ್ಟ್ ಇಂಡಿಯಾ ಕಂಪನಿಯ ಆಡಳಿತವನ್ನು ಇಂಗ್ಲೆಂಡಿನ ವಿಕ್ಟೋರಿಯಾ ಮಹಾರಾಣಿಯು ೧೮೫೮ರಲ್ಲಿ ತನ್ನ ಕೈಯಲ್ಲಿ ತೆಕ್ಕೊಂಡಳು ಅರ್ಥಾತ್ ಪ್ರಾಯೋಗಿಕವಾಗಿ ಇಂಡಿಯಾ ಬ್ರಿಟಿಷ್ ಸರಕಾರದ ನೇರ ಆಡಳಿತಕ್ಕೆ ಒಳಪಟ್ಟಿತು. ಅಗ್ಗ ಬ್ರಿಟಿಷ್ ಸರಕಾರವು ಭಾರತದಲ್ಲಿ ಮಾಡಿದ ಆಡಳಿತದ ವ್ಯವಸ್ಥೆಯು. ಸ್ವಲ್ಪ ಹೆಚ್ಚು ಕಡಿಮೆ. ಸ್ವಾತಂತ್ರ್ಯ ನಂತರದ ಇಂದಿನವರೆಗೂ ಬಂದಿದೆಯೆನ್ನಲಡ್ಡಿಯಿಲ್ಲ. ೧೮೫೮ರಲ್ಲಾದ ಆಡಳಿತದ ಸುಧಾರಣೆಯ ಪ್ರಕಾರ ಲಂಡನ್‌ದಲ್ಲಿ ಇಂಡಿಯಾ ಆಫೀಸ (ಭಾರತ ಕಚೇರಿ) ಸ್ಥಾಪನೆಯಾಗಿ. ಅದಕ್ಕೆ ಬ್ರಿಟಿಷ್ ಕ್ಯಾಬಿನೆಟ್ ಮಂತ್ರಿ. "ಸೆಕ್ರೆಟರಿ ಆಫ್ ಸ್ಟೇಟ ಫಾರ ಇಂಡಿಯಾ". ಮುಖ್ಯಸ್ಥರಾಗಿದ್ದರು. ಈತನ ಸಿಫಾರಸಿನ ಮೇಲೆ ಇಂಗ್ಲಂಡ ರಾಣಿಯು ಭಾರತದ ಗವರ್ನರ ಜನರಲ್ಲರನ್ನು ನೇಮಿಸುತ್ತಿದ್ದಳು. ಗವರ್ನರ ಜನರಲ್ಲನ ಸಿಫಾರಸನ್ನು ಆಧಾರಿತ. ಮಂತ್ರಿಯು ಸಿಫಾರಸಿನ ಮೇಲೆ ಬ್ರಿಟಿಷ್ ಭಾರತದ ಪ್ರಾಂತಿಕ ಗವರ್ನರರನ್ನು ಬ್ರಿಟಿಷ್ ಮಹಾರಾಣಿಯು ನಿಯಮಿಸುತ್ತಿದ್ದಳು. ಸ್ವಾತಂತ್ರ್ಯದವರೆಗೆ ಅಗ್ಗ ಬ್ರಿಟಿಷ್ ಭಾರತ ಹಾಗೂ ಭಾರತೀಯ ಭಾರತ ಎಂದು ಭಾರತದಲ್ಲಿ ಎರಡು ಆಡಳಿತಗಳಿದ್ದವು. ಬ್ರಿಟಿಷ್ ಭಾರತವು ನೇರವಾಗಿ ಬ್ರಿಟಿಷರ ಆಳ್ವಿಕೆಯಲ್ಲಿದ್ದು ಸುಧಾರಣೆ ಹೊಂದಿ ಮುಂದೆ ಕಾಂಗ್ರೆಸ್ಸಿಗರ ಪರ್ಜಸ್ಸಿಗೆ. ಆಡಳಿತಕ್ಕೆ ಒಳಗಾಯಿತು. ಭಾರತೀಯ ಭಾರತವು ಅಳರಸರ ಮುಖಾಂತರ ಬ್ರಿಟಿಷರ

ಕ್ಕೆಯಲ್ಲಿದ್ದು ಸ್ವಾತಂತ್ರ್ಯಾನಂತರ ಕಾಂಗ್ರೆಸ್ ಆಡಳಿತಕ್ಕೆ ಒಳಪಟ್ಟಿತು. ಬ್ರಿಟಿಷ್ ಭಾರತದ ಪ್ರಾಂತಗಳಲ್ಲಿ ಡಿವಿಜನ್ನುಗಳನ್ನು, ಪ್ರತಿ ಡಿವಿಜನ್ನಿನಲ್ಲಿ ಜಿಲ್ಲೆಗಳನ್ನು ಹಾಗೂ ಪ್ರತಿ ಜಿಲ್ಲೆಯಯಲ್ಲಿ ತಾಲೂಕುಗಳನ್ನು ವಿಂಗಡಿಸಲಾಯಿತು. ೧೯೪೭ರ ಭಾರತ ಸರಕಾರದ ಕಾಯ್ದೆಯ ಮೇರೆಗೆ ಭಾರತಕ್ಕೆ ಸ್ವಾತಂತ್ರ್ಯ ನೀಡಲಾಯಿತಲ್ಲದೆ, ಲಂಡನದಲ್ಲಿಯ ಇಂಡಿಯಾ ಕಚೇರಿಯನ್ನು ಖಾಯಂ ಆಗಿ ಮುಚ್ಚಲಾಯಿತು.

ಪ್ರಾಚೀನ ಕಾಲದಿಂದ ಇಂದಿನ ಸ್ವಾತಂತ್ರ್ಯದವರೆಗೆ ದೇಶದಲ್ಲಿ ಆಡಳಿತಾಧಿಕಾರಿಗಳು ಎಷ್ಟೇ ಬದಲಿಯಾದರೂ ಭಾರತದ ಹಳ್ಳಿಗಳ ಆಡಳಿತವು ಮಾತ್ರ ತನ್ನ ವೈಶಿಷ್ಟ್ಯವನ್ನು ಅವ್ಯಾಹತವಾಗಿ ಉಳಿಸಿಕೊಂಡು ಬಂದಂತಿದೆ. "ಪಂಚಾಯತ"ವು ಸಾಮಾನ್ಯವಾಗಿ ಹಳ್ಳಿಯ ಪಂಚಾಯತವನ್ನೇ ಸೂಚಿಸುವುದು. ಹಳ್ಳಿಯ ಆಡಳಿತವೆಂದರೆ ಅದರ ಪಂಚಾಯತ ಆಡಳಿತವು. ಹಳ್ಳಿಯ ಪಂಚರು ಹಳ್ಳಿಗರ ದೃಷ್ಟಿಯಲ್ಲಿ ಪರಮೇಶ್ವರರು. "ಪಂಚ ಪರಮೇಶ್ವರ" ಎಂಬ ಶಬ್ದ ಹಾಗೂ ವಿಚಾರಗಳು ಪ್ರಾಚೀನದಿಂದಲೂ ಬಂದಿವೆ. ಹಳ್ಳಿಯ ಸುಮಾರು ಐದು ಪ್ರಮುಖರು ಹೇಳಿದ್ದೇ ಮಾನ್ಯ. ಅವರೇ ಸರಕಾರ, ಅವರೇ ನ್ಯಾಯಾಧೀಶ ಎಲ್ಲವೂ. ಆಗ್ಗೆ ಹಿರಿಯರಿಗೆ, ಮಾತಿಗೆ, ನ್ಯಾಯ, ನೀತಿ, ಧರ್ಮಕ್ಕೆ ಬೆಲೆ ಇತ್ತು. ಕೋರ್ಟು, ಕಚೇರಿ, ಪೋಲೀಸರ ಅವಶ್ಯಕತೆ ಅವರಿಗಿರಲಿಲ್ಲ. ಈಗಲಾದರೂ ಎಷ್ಟೋ ಹಳ್ಳಿಯ ಸಮಸ್ಯೆಗಳು ಹಳ್ಳಿಯ ಪಂಚ ಪರಮೇಶ್ವರರಿಂದಲೇ ಪರಿಹಾರ ಕಾಣುವವು.

ಅವನ್ನು ಧಿಕ್ಕರಿಸಿ ಪಟ್ಟಣಕ್ಕೆ ಬಂದು ಕೋರ್ಟು. ಕಛೇರಿ,ವಕೀಲ ಹಾಗೂ ಪೋಲೀಸರ ಕೈಯಲ್ಲಿ ನುಗ್ಗಾಗಿ ಬುದ್ಧಿ ಕಲಿಯುತ್ತಿರಬಹುದು. ಅಥವಾ ಸರಿಯಾದ ನ್ಯಾಯವನ್ನು ಪಡೆಯುತ್ತಿರಬಹುದು.

ಸ್ವಾತಂತ್ರ್ಯಾನಂತರದ ಪಂಚಾಯತ ಆಡಳಿತವು ಕೇವಲ ಗ್ರಾಮ ಪಂಚಾಯತ ಆಡಳಿತವಾಗಿರದೆ, ಅದರ ಮೇಲ್ಪಟ್ಟಿದ ಮಂಡಲ ಪಂಚಾಯತ. ತಾಲೂಕಾ ಆಡಳಿತ ಹಾಗೂ ಇನ್ನೂ ವ್ಯಾಪಕವಾಗಿ ಜಿಲ್ಲಾ ಆಡಳಿತವಾಗಿ. ಒಟ್ಟಿನಲ್ಲಿ ಸಮಗ್ರ ಹಳ್ಳಿಗಾಡಿನ ಪಂಚಾಯತ ಆಡಳಿತವಾಗಿದೆ. ಪ್ರತಿಯೊಂದು ಗ್ರಾಮವು ಗ್ರಾಮರಾಜ್ಯವಾಗಿ ತನ್ನಲ್ಲಿ ರಾಮರಾಜ್ಯದ ಕನಸನ್ನು ನನಸನ್ನಾಗಿಸಬೇಕಾಗಿದೆ. ಪ್ರತಿಯೊಂದು ಗ್ರಾಮವು ಈ ರೀತಿ ಆಡಳಿತದಲ್ಲಿ ಸುಧಾರಣೆ ಹೊಂದಿ ತನ್ನ ಗ್ರಾಮಸ್ಥರಿಗೆ ಸರ್ವಾಂಗೀಣ ಉನ್ನತಿ, ಉತ್ಕರ್ಷ ನೀಡಿದರೆ ಇಡೀ ಭಾರತ ರಾಮರಾಜ್ಯವಾಗುವುದು. ದೇಶದ ಲೋಕಸಭೆಗೆ ಅದರ ಹಳ್ಳಿಗಳ ಗ್ರಾಮಸಭೆಗಳು ಆಧಾರ ಸ್ತಂಭಗಳಾಗಿರಬೇಕು. ಬೇರುಗಳಾಗಿರಬೇಕು. ಅಂದರೆ ಗ್ರಾಮಸಭೆಗೂ ಹಾಗೂ ಲೋಕಸಭೆಗೂ ಎರಡಕ್ಕೂ ಅನ್ಯೋನ್ಯತೆಯ ಸಂಬಂಧ ಕುದುರುವುದು. ಇದುವೇ ಗ್ರಾಮಾಡಳಿತದ ದೃಷ್ಟಿಯಲ್ಲಿ ಮಹಾತ್ಮಾ ಗಾಂಧೀಜಿಯವರ ವಿಚಾರ. ಇದುವೇ ಗಾಂಧೀವಾದ. ಇದನ್ನಾಧರಿಸಿಯೇ ನಮ್ಮ ಸದ್ಯದ ಸಂವಿಧಾನದ ನಾಲ್ಕನೇ ವಿಭಾಗವಾದ "ರಾಜ್ಯ ನೀತಿಯ ಮಾರ್ಗದರ್ಶಕ ತತ್ತ್ವಗಳ" (Directive principles of state policy) ಅಡಿಯಲ್ಲಿ

೪೦ನೆಯ ಕಲಮು ಈ ಪಂಚಾಯತ ಆಡಳಿತವನ್ನು ಸೂಚಿಸುವುದು. ಆ ಸೂಚನೆಗೆ ಮಾನ್ಯತೆ ನೀಡಿ ಬಲವಂತರಾಯ ಮೆಹತಾ ಕಮಿಟಿಯನ್ನು ಭಾರತ ಸರಕಾರವು ನಿಯಮಿಸಿ ಅದರ ಶಿಫಾರಸಿನ ಮೇರೆಗೆ ಈಗ ದೇಶದಾದ್ಯಂತ "ಪಂಚಾಯತ ರಾಜ್ಯ" ಅಥವಾ "ಪಂಚಾಯತ ಆಡಳಿತ"ವನ್ನು ಜಾರಿಯಲ್ಲಿ ತಂದಿರುವುದು. ಈ ಮಾರ್ಗದಲ್ಲಿ ಸ್ವಾಭಾವಿಕವಾಗಿ ಎಡರು ತೊಡರುಗಳು ಬಂದರೂ. ಅವನ್ನು ಲೆಕ್ಕಿಸದೆ ಆಡಳಿತವು ಮುನ್ನಡೆದಿದೆ. ಕರ್ನಾಟಕವು ಹಿಂದೆ ಕೇಂದ್ರ ಸರಕಾರವು ನೇಮಿಸಿದ ಅಶೋಕ ಮೆಹ್ತಾ ಕಮಿಟಿಯ ವರದಿಯನ್ನು ಆಧರಿಸಿ ಇತ್ತೀಚೆಗೆ ಮಂಡಲ ಪಂಚಾಯತ ಹಾಗೂ ಜಿಲ್ಲಾ ಪರಿಷತ್ತಿನ ಕಾಯ್ದೆಯನ್ನು ಜಾರಿಯಲ್ಲಿ ತಂದಿದೆ.

## ೨. ಶಾಬ್ದಿಕ ವಿಂಗಡಣೆ ಹಾಗೂ ಅವುಗಳ ಅರ್ಥ

ಪ್ರತಿಯೊಂದು ಶಬ್ದಕ್ಕೂ ತನ್ನದೇ ಅರ್ಥವಿರುತ್ತದೆ ಹಾಗೂ ಅದಕ್ಕೆ ತನ್ನದೇ ಆದ ಮೌಲ್ಯವಿರುತ್ತದೆ. ಮೇಲಾಗಿ ಆಯಾ ಶಬ್ದದಲ್ಲಿ ಅದರ ಅರ್ಥವೂ ಅಳವಡಿಸಿರುವುದಲ್ಲದೆ. ಅದರ ರೂಪ. ರೇಷೆ. ಸ್ವಭಾವ ಗುಣಗಳೂ ಕೂಡ ಸ್ಪಷ್ಟವಾಗಿ ಗೋಚರಿಸಬಹುದು. ಕೆಲಸಂದರ್ಭಗಳಲ್ಲಿ. ಕೆಲ ಶಬ್ದಗಳು ಮೇಲ್ನೋಟಕ್ಕೆ ಒಂದೇ ಎನಿಸಿದರೂ ಮೌಲಿಕವಾಗಿ ಅವು ಬೇರೆಯಾಗಿರಬಹುದು. ಉದಾಹರಣಾರ್ಥವಾಗಿ. ಪ್ರಜಾಪ್ರಭುತ್ವವಾದಿ ವಿಕೇಂದ್ರೀಕರಣ (Democratic Decentralization). ಹಳ್ಳಿಗಾಡಿನ ಪ್ರಜಾಪ್ರಭುತ್ವ (Rural Democracy). ಪ್ರಜಾಪ್ರಭುತ್ವದ

ಮೂಲ ಬೇರುಗಳು (Grass roots of Democracy). ಸ್ವರಾಜ್ಯ (Self rule), ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳು (Local self Government). ಸಮುದಾಯದೇಳ್ಗೆ (Community Development), ಪಂಚಾಯತ ಆಡಳಿತ (Panchayat Raj) ಮತ್ತು ಪಂಚಾಯತ ಮುಂತಾದ ಶಬ್ದಗಳಿಗೆ ತಮ್ಮದೇ ಆದ ಅರ್ಥ ಹಾಗೂ ಮೌಲ್ಯಗಳಿವೆ. ಈ ಶಬ್ದಗಳ ವಿಂಗಡಣೆ, ಅವುಗಳ ನಿರ್ದಿಷ್ಟ ಅರ್ಥ, ಹಾಗೂ ಅವುಗಳ ಮೌಲ್ಯಗಳ ಗುಣ ಸ್ವಭಾವ, ವ್ಯಾಪಕತೆಗಳನ್ನು ಸರಿಯಾಗಿ ತಿಳಿದುಕೊಳ್ಳುವುದು ಅತ್ಯವಶ್ಯ ಹಾಗೂ ಸಮಂಜಸ. ಪ್ರಚಲಿತದಲ್ಲಿ ಒಮ್ಮೊಮ್ಮೆ ಅನುಕೂಲಕ್ಕಾಗಿಯೋ ಅಥವಾ ತಿಳಿಯದೆಯೋ ಒಂದರ ಬದಲು ಒಂದು ಶಬ್ದವನ್ನು ಬಳಸುವುದುಂಟು. ಶಾಸ್ತ್ರೀಯವಾಗಿ ಶಬ್ದಗಳ ವಿಂಗಡಣೆ ಮಾಡಿ. ಅವುಗಳ ನಿರ್ದಿಷ್ಟ ಅರ್ಥಕ್ಕೆ ಅನುಗುಣವಾಗಿ ಅವುಗಳನ್ನು ಬಳಸುವುದು ಹೆಚ್ಚು ಒಳ್ಳೆಯದು. ಅಂದರೆ ಅಲ್ಲಿ ಸಂಶಯಕ್ಕೆ ಅಸ್ಪದವಿಲ್ಲ.

"ಪ್ರಜಾಪ್ರಭುತ್ವವಾದಿ ವಿಕೇಂದ್ರೀಕರಣ"ದಲ್ಲಿ ಮುಖ್ಯವಾಗಿ ಅಧಿಕಾರದ ವಿಕೇಂದ್ರೀಕರಣವಿದೆ. ಅಧಿಕಾರವು ಕೇಂದ್ರದಲ್ಲಿ ಕೇಂದ್ರೀಕೃತವಾಗುವುದರ ಬದಲು, ಕೇಂದ್ರದಿಂದ ತನ್ನ ಪರಿಘದ ಕಡೆಗೆ ಅಧಿಕಾರವನ್ನು ಹಂತ ಹಂತವಾಗಿ ಹಂಚಿಕೊಡುವುದು. ಈ ಕಾರ್ಯವು ಪ್ರಜಾಪ್ರಭುತ್ವದ ತಳಹದಿಯ ಮೇಲೆ ನಡೆಯಬೇಕು. ಅರ್ಥಾತ್ ಜನತೆಯ ಆಶೋತ್ತರಗಳಿಗನುಗುಣವಾಗಿ ಕಾರ್ಯ ನಡೆಯಬೇಕು. ಪ್ರಜಾಪ್ರಭುತ್ವವಾದಿ ಸಂವಿಧಾನವು ಸಾಮಾನ್ಯವಾಗಿ "ನಾವು ಜನತೆ......" ಎಂದು ರಾಷ್ಟ್ರದ

ಜನತೆಯೆಲ್ಲ ಒಂದಾಗಿ ಒಕ್ಕೊರಲಿನಿಂದ ನುಡಿವುದೇನೋ ಎಂಬಂತೆ ಪ್ರಾರಂಭವಾಗುವುದು. ಉದಾಹರಣೆಗೆ, ನಮ್ಮ ಭಾರತದ ಸಂವಿಧಾನವಾದರೂ "ನಾವು ಭಾರತದ ಜನತೆ..." ಎಂದು ಪ್ರಾರಂಭವಾಗಿರುವುದು ಈ ಪ್ರಜಾಪ್ರಭುತ್ವದ ಸಂಕೇತ. ಪ್ರಜರೇ ಪ್ರಭುಗಳು, ನಾಗರಿಕರು ಸಹ. ಅಧಿಕಾರದ ಮೂಲ ಸ್ಥಾನ ಇಡೀ ಜನತೆ ಅಥವಾ ಪ್ರಜರು. ಈ ತಳಹದಿಯಮೇಲೆ ರಾಷ್ಟ್ರದ ಅಧಿಕಾರದ ವಿಂಗಡಣೆಯಾಗುವುದು "ಪ್ರಜಾಪ್ರಭುತ್ವ ವಾದಿ ವಿಕೇಂದ್ರೀಕರಣ." ಭಾರತವು ಸಂಯುಕ್ತ ರಾಜ್ಯ (Federal State) ಪದ್ಧತಿ ಪಡೆದಿರುವುದರಿಂದ, ಭಾರತ ಸಂವಿಧಾನವು ಕೆಲ ಅಧಿಕಾರಗಳನ್ನು ಕೇಂದ್ರ ಸರಕಾರಕ್ಕೂ ಹಾಗೂ ಕೆಲ ಅಧಿಕಾರಗಳನ್ನು ರಾಜ್ಯ ಸರಕಾರಗಳಿಗೂ ನೀಡಿರುವುದು. ಅದೇ ರೀತಿ ಪ್ರತಿಯೊಂದು ರಾಜ್ಯವು ತನಗೆ ಅನುಕೂಲವಾಗುವಂತೆ ಕೆಲ ಅಧಿಕಾರಗಳನ್ನು ರಾಜ್ಯದ ಕೇಂದ್ರದಿಂದ ಜಿಲ್ಲೆಗೂ, ತಾಲೂಕಿಗೂ, ಪ್ರತಿ ಹಳ್ಳಿಗೂ ನೀಡಬಹುದು. ಇದು "ಪ್ರಜಾಪ್ರಭುತ್ವವಾದಿ ವಿಕೇಂದ್ರೀಕರಣ"ವು. ಈ ಪದ್ಧತಿಯಿಂದ ದೇಶದ, ರಾಜ್ಯದ ಎಲ್ಲ ಭಾಗಗಳೂ ತಮ್ಮ ಪಾಲಿನ ಹಕ್ಕನ್ನು ಪಡೆದು ತಮ್ಮ ಕರ್ತವ್ಯ ನಿರ್ವಹಿಸಲು ಅನುಕೂಲವಾಗುವುದಲ್ಲದೆ, ಸರ್ವರಿಗೂ ಸಮಾನಾವಕಾಶಗಳು ದೊರೆಯುವವು. ಸಮಾನತೆ, ಸ್ವಾತಂತ್ರ್ಯ, ಸಮಬಂಧುತ್ವವೆ ಪ್ರಜಾಪ್ರಭುತ್ವ. ಈ ತಳಹದಿಯ ಮೇಲೆ ಅಧಿಕಾರ ಹಂಚಿಹೋಗುವುದು "ಪ್ರಜಾಪ್ರಭುತ್ವವಾದಿ ವಿಕೇಂದ್ರೀಕರಣ". "ಪಂಚಾಯತ ಆಡಳಿತ"ವಾದರೂ ಈ ತತ್ವದ ಮೇಲೆ ನಿರ್ಮಾಣಗೊಂಡಿರುವುದು. ಅದರೂ ಎರಡೂ

ಶಬ್ದಗಳು ಭಿನ್ನವಾಗಿವೆ. ಮೊದಲನೆಯದು ಅಧಿಕಾರ ವಿಂಗಡಣೆಯ ಸಾಮಾನ್ಯ ವಿಧಾನ. ತತ್ವವನ್ನು ಸೂಚಿಸಿದರೆ, ಎರಡನೆಯದು ಒಂದು ವಿಶಿಷ್ಟವಾದ ಸ್ಥಾನಿಕ ಹಳ್ಳಿಗಾಡಿನ ((Rural) ಆಡಳಿತವನ್ನು ಸೂಚಿಸುವುದು.

"ಹಳ್ಳಿಗಾಡಿನ ಪ್ರಜಾಪ್ರಭುತ್ವವು" ಮುಖ್ಯವಾಗಿ ಹಳ್ಳಿಗಳ ಸಮುದಾಯವು ಪ್ರಜಾಪ್ರಭುತ್ವದ ಆಡಳಿತವನ್ನು ಹೊಂದಿರುವ ಅಥವಾ ಹೊಂದಬೇಕೆನ್ನುವ ವಿಷಯವನ್ನು ಸೂಚಿಸುವುದು. ಪ್ರತಿ ಹಳ್ಳಿಗೂ ಅಥವಾ ಕೆಲಹಳ್ಳಿಗಳ ಸಮುದಾಯಕ್ಕೆ ಪ್ರಜಾಪ್ರಭುತ್ವ ಆಡಳಿತವಿರಬೇಕೆಂಬುದು ಈ "ಹಳ್ಳಿಗಾಡಿನ ಪ್ರಜಾಪ್ರಭುತ್ವ"ದ ಉದ್ದೇಶ. ಹಳ್ಳಿಗಳ ಜನತೆಯ ಆಶೋತ್ತರಗಳಿಗನುಗುಣವಾಗಿ ಅಲ್ಲಿಯ ಆಡಳಿತ ನಡೆಯಬೇಕು. ಅಂದರೆ ಎಲ್ಲರಿಗೂ ಸಮಾನತೆ, ಸ್ವಾತಂತ್ರ್ಯ, ಸಹಬಂಧುತ್ವ ದೊರಕುವುದು. ಸ್ಥಾನಿಕ ಸಮಸ್ಯೆಗಳು, ಸ್ಥಾನಿಕವಾಗಿ ಸ್ಥಾನಿಕರಿಂದ ಬಗೆಹರಿಸಲ್ಪಡುವವು. ಈ ಹಳ್ಳಿಗಾಡಿನ ಜನತೆ ಕೇಂದ್ರದ ದಾರಿ ಕಾಯುವುದಾಗಲಿ ಅಥವಾ ಕೇಂದ್ರದ ಕಡೆಗೆ ಧಾವಿಸುವುದಾಗಲಿ ತಪ್ಪುವುದು. ಅವುಗಳಿಗೆ ತಮ್ಮದೇ ಆದ ಸ್ವಾಯತ್ತತೆ, ಸ್ಥಾನ, ಮಾನ ಲಭಿಸುವವು. ಇಲ್ಲಿ ಭಾರತೀಯ ಸಂಸ್ಕೃತಿಯ ಒಂದು ವಿಶಿಷ್ಟ ಗುಣ ಅಡಕವಾಗಿದೆ. ಗಾಂಧೀವಾದವಿದೆ, ನಿಜ ಪ್ರಜಾಪ್ರಭುತ್ವವಿದೆ. ಭಾರತವು ಹಳ್ಳಿಗಳ ನಾಡಾಗಿರುವುದರಿಂದ ಹಳ್ಳಿಗಳಿಗೆ ಪ್ರಜಾಪ್ರಭುತ್ವದ ಆಡಳಿತವನ್ನು ನೀಡುವುದರಿಂದ ಸ್ವಾಭಾವಿಕವಾಗಿ ಇಡೀ ಭರತಖಂಡ ಪ್ರಜಾಪ್ರಭುತ್ವವಾಗು

ವುದು. ಹಳ್ಳಿಗಳಿಗೆ ಪ್ರಜಾಪ್ರಭುತ್ವದ ಸಂಸ್ಕಾರ ನೀಡುವು ದೆಂದರೆ, ಗಿಡದ ಬೇರುಗಳಿಗೆ ಪೌಷ್ಟಿಕ ಆಹಾರ ನೀಡಿದಂತಾಗು ವುದು. ಅಂದರೆ ಮರವು ಫಲಪಲಿಸಲು ಅನುವಾಗುವುದು. "ಹಳ್ಳಿಗಾಡಿನ ಪ್ರಜಾಪ್ರಭುತ್ವ"ದ ತಾತ್ಪರ್ಯ, ಉದ್ದೇಶ ಇದೇ ಆಗಿರುವುದು.

ಬ್ರಿಟಿಷರು "ಪಟ್ಟಣಗಳ ಪ್ರಜಾಪ್ರಭುತ್ವ"ಕ್ಕೆ (Urban Democracy) ಹೆಚ್ಚು ಮಹತ್ವ ಕೊಟ್ಟಿದ್ದರು. ಲಾರ್ಡ ರಿಪ ನ್ನನು ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳ ಬಗೆಗೆ, ೧೮–ಮೇ ೧೮೮೨ರಲ್ಲಿ ಕೆಲವು ಠರಾವು ಪಾಸುಮಾಡಿದ್ದು ಭಾರತದ ಆಡಳಿತ ಸುಧಾರಣೆ ಯಲ್ಲಿ ಒಂದು ಮೈಲುಗಲ್ಲು. ಹಫ್ ಟಿಂಕರರ ದೃಷ್ಟಿಯಲ್ಲಿ ಇದು ಅತಿಶ್ರೇಷ್ಠ ಆವಿಷ್ಕರಣ.[3] ಈ ಠರಾವಿನ ಮುಖಾಂತರ ಬ್ರಿಟಿಷ್ ಭಾರತದಲ್ಲಿ ಜಿಲ್ಲಾ ಬೋರ್ಡು ಮತ್ತು ತಾಲೂಕು ಬೋರ್ಡು (ಮಂಡಳಿ) ಗಳೆಂದು ಎರಡು ಹಂತದ ವ್ಯವಸ್ಥೆ ಜಾರಿಯಲ್ಲಿ ಬಂದಿತು. ಮುಂದೆ ೧೮೯೨ರ ಮತ್ತು ೧೯೦೯ರ "ಭಾರತೀಯ ಮಂಡಳಿಗಳ ಕಾಯ್ದೆ" (The Indian Councils Act) ಗಳ ಮುಖಾಂತರ ಅವು ಹೆಚ್ಚು ಪ್ರಜಾಪ್ರಭುತ್ವವಾದಿ ಸ್ವಾಯತ್ತತೆಯನ್ನು ಪಡೆದವು. ಆದರೆ ಇವು ಕೇವಲ ಜಿಲ್ಲೆ ಮತ್ತು ತಾಲೂಕುಗಳ ಕೇಂದ್ರ ಸ್ಥಾನಗಳಾದ ಪಟ್ಟಣಗಳಿಗೆ ಮಾತ್ರ

---

3 Hugh Tinkar, —Foundations of Local self Government in India, Pakistan and Burma.

ಸೀಮಿತವಾಗಿದ್ದವು. ಅಂದರೆ ಇವು "ಪಟ್ಟಣ ಪ್ರಜಾಪ್ರಭುತ್ವ"ದ ಮೇಲೆ ಮಾತ್ರ ಅವಲಂಬಿತವಾಗಿದ್ದವು.

ಸದ್ಯದ "ಪಂಚಾಯತ ಆಡಳಿತ"ವು "ಹಳ್ಳಿಗಾಡಿನ ಪ್ರಜಾ ಪ್ರಭುತ್ವ"ದ ಮೇಲೆ ಅವಲಂಬಿತವಾಗಿರುವದು. ಆದರೂ ಈ ಎರಡೂ ಶಬ್ದಗಳು ಭಿನ್ನವಾಗಿವೆ. ಮೊದಲನೆಯದು ಒಂದು ನಿರ್ದಿಷ್ಟ ಸ್ಥಾನಿಕ ಆಡಳಿತದ ಪದ್ಧತಿಯನ್ನು ಸೂಚಿಸಿದರೆ, ಎರಡನೆಯದು ಸಾಮಾನ್ಯ ಹಳ್ಳಿಗಾಡಿನ ಆಡಳಿತ ತತ್ವವನ್ನು ಸೂಚಿಸುವುದು; ಮತ್ತು ಅನಿರ್ದಿಷ್ಟ ವಿಶಾಲಾರ್ಥದ ರೂಪದ ಹೊದಿಕೆ ತೊಟ್ಟಿದೆ.

"ಪ್ರಜಾಪ್ರಭುತ್ವದ ಮೂಲ ಬೇರು" ಅಧಿಕಾರದ ತಳ ಹದಿಯು ಹಳ್ಳಿಗಾಡು ಹಾಗೂ ಜನತೆಯಾಗಿರಬೇಕೆಂಬುದನು ಸೂಚಿಸುವುದು. ಕರಕಿಯ ಬೇರುಗಳು ಆಳವಾಗಿ ನೆಲದಲ್ಲಿ ಇಳಿದಿರುವಂತೆ ರಾಷ್ಟ್ರದ ಅಧಿಕಾರಗಳು ಕೇಂದ್ರದ ಕೆಳಗೆ ಅಥವಾ ಅದರ ಪರೀಘದೆಡೆಗೆ ವಿಕೇಂದ್ರೀಕೃತವಾಗಬೇಕೆಂಬುದು ಇದರ ತಾತ್ಪರ್ಯ. ಕರಕಿಗೆ ತನ್ನದೇ ಆದ ವಿಶಿಷ್ಟ ಗುಣಧರ್ಮವಿದೆ. ಭೂಮಿಯ ಮೇಲೆ ಹೆಚ್ಚು ಎತ್ತರ ಅದು ಬೆಳೆಯುವುದಿಲ್ಲ. ಅದರ ಬೇರು ಹೆಚ್ಚು ಆಳಕ್ಕೆ ಇಳಿದಿರುತ್ತವಲ್ಲದೆ ಎಲ್ಲ ಕಡೆಗೂ ಅದು ಪಸರಿಸುತ್ತದೆ. ಮೇಲೆ ಒಣಗಿದಂತೆ ಕಂಡು ಬಂದರೂ ಕೆಳಗೆ ಬೇರುಗಳು ಹಸಿಯಾಗಿರುತ್ತವೆ. ಸ್ವಲ್ಪ ಹಸಿ ಸಿಕ್ಕರೆ ಸಾಕು ಅದು ನಳನಳಿಸುವುದು. ಈ ಕರಕಿಯಂತೆ ಪ್ರಜಾಪ್ರಭುತ್ವದ ಬೇರುಗಳು ಆಳವಾಗಿ ಹಳ್ಳಿಗಾಡಿನಲ್ಲಿ, ಜನತೆಯಲ್ಲಿ ಸುತ್ತೆತ್ತಲೂ

ಪಸರಿಸಬೇಕೆಂಬುದು ಈ ಶಬ್ದದ ತಾತ್ಪರ್ಯ. ಈ ಅರ್ಥದ ಮೇಲೆ, ತತ್ವದ ಮೇಲೆ ಪಂಚಾಯತ ಆಡಳಿತವು ನಿರ್ಮಾಣ ಗೊಂಡಿದೆ. ಆದರೂ ಎರಡೂ ಶಬ್ದಗಳು ಭಿನ್ನವಾಗಿವೆ. "ಪಂಚಾಯತ ಆಡಳಿತ" ಒಂದು ನಿರ್ದಿಷ್ಟತೆಯನ್ನು ಪಡೆದಿರು ವುದು. ಮತ್ತೊಂದು ಸಾಮಾನ್ಯ ರೂಪರೇಷೆಯನ್ನು. ಗುರಿ ಯನ್ನು ತೋರಿಸುವುದು.

"ಸ್ವರಾಜ್ಯ"ವು ಸ್ವಂತದ (ಸ್ವ) ಆಡಳಿತ (ರಾಜ್ಯ) ವನ್ನು ಸೂಚಿಸುವದು. ಪರಕೀಯರ ಆಡಳಿತದ ಬದಲು ಸ್ವದೇಶೀ ಯರ ಆಡಳಿತವು ಶ್ರೇಷ್ಠ. ಸ್ವಂತ ಅಭ್ಯಾಸ ಮಾಡುವುದು ಹೇಗೆ ಶ್ರೇಷ್ಠವೋ ಸ್ವಂತ ಆಡಳಿತ ಮಾಡುವುದೂ ಶ್ರೇಷ್ಠ. ಆದರಲ್ಲಿ ತನ್ನ ಆಶೋತ್ತರಗಳು ಅಡಕವಾಗಿವೆ. ಅಲ್ಲಿ ತನ ಗಾಗಿಯೇ ತಾನಿರುವ. ಪ್ರಜೆ. ಪ್ರಭು ಎರಡೂ ತಾನಾಗಿರುವ, ಇದು ಪ್ರಜಾಪ್ರಭುತ್ವ. "ಸ್ವರಾಜ್ಯವು ನನ್ನ ಜನ್ಮಸಿದ್ಧ ಹಕ್ಕು" ಎಂಬುದು ಬಾಲ ಗಂಗಾಧರ ಟಿಳಕರ ಘೋಷಣೆಯಾಗಿತ್ತು. ಸದ್ಯದ ಪಂಚಾಯತ ಆಡಳಿತವಾದರೂ ಈ ಸ್ವರಾಜ್ಯ ತತ್ವದ ಮೇಲೆ ನಿರ್ಮಾಣಗೊಂಡಿರುವುದು. ಆದಾಗ್ಯೂ ಎರಡೂ ಶಬ್ದ ಗಳು ಭಿನ್ನವಾಗಿವೆ. ಒಂದು ನಿರ್ದಿಷ್ಟ. ಇನ್ನೊಂದು ಅನಿರ್ದಿಷ್ಟ.

"ಸ್ಥಾನಿಕ ಸ್ವರಾಜ್ಯ ಸಂಸ್ಥೆ"ಯು ಪ್ರತಿಯೊಂದು ಸ್ಥಾನಿಕಕ್ಕೆ ತನ್ನದೇ ಆದ ಸ್ವಂತ ಪ್ರಜಾಪ್ರಭುತ್ವ ಆಡಳಿತವನ್ನು ನೀಡುವ ತತ್ವವನ್ನು ಹೊಂದಿದೆ. ಈ ಹಿಂದೆ ಹೇಳಿದಂತೆ, ಪ್ರೇ. ೧೮. ೧೮೮೨ ರಂದು ಲಾರ್ಡ ರಿಪನ್ನನು ಸ್ಥಾನಿಕ ಸ್ವರಾಜ್ಯ ಸಂಸ್ಥೆಯು

ತರಾವನ್ನು ಪಾಸುಮಾಡಿ ಜಾರಿಯಲ್ಲಿ ತಂದರು. ಆದರೆ ಈ ಸಂಸ್ಥೆಗಳು ಎಲ್ಲ ಸ್ಥಾನಿಕಕ್ಕೂ ಹೋಗಿ ಮುಟ್ಟದೆ ಕೇವಲ ಎರಡು ವಿಧದ ಹಂತಗಳಲ್ಲಿ ಮಾತ್ರ-ಅಂದರೆ ಜಿಲ್ಲೆ ಮತ್ತು ತಾಲೂಕು ಕೇಂದ್ರಗಳಲ್ಲಿ ಮಾತ್ರ ನಿರ್ಮಾಣಗೊಂಡವು. ಅಂದರೆ ಇವು ಪಟ್ಟಣಗಳ ಪ್ರಜಾಪ್ರಭುತ್ವಕ್ಕೆ ನಾಂದಿಯಾದವು. ಹಳ್ಳಿಗಾಡಿಗೆ ಇವು ಹೋಗಿ ಮುಟ್ಟಲಿಲ್ಲ. ಬ್ರಿಟಿಷರ ಕಚೇರಿ ಆಡಳಿತಗಳು ಜಿಲ್ಲೆ ಮತ್ತು ತಾಲೂಕುಗಳಿಗೆ ಮಾತ್ರ ಸೀಮಿತವಾದುದು ಇವಕ್ಕೆ ಒಂದು ಕಾರಣ. ಮೇಲಾಧಿಕಾರಿ ಸರಿಯಾಗಿದ್ದರೆ ಸ್ವಾಭಾವಿಕವಾಗಿ ಅವರ ಕೈಕೆಳಗಿನ ಅಧಿಕಾರಿಗಳೂ ಸುಧಾರಿಸುತ್ತಾರೆ ಎಂಬ ವಿಚಾರವೂ ಅವರದ್ದಾಗಿರಬಹುದು ಅಥವಾ ಹಳ್ಳಿಗಾಡಿನ ಅಶಿಕ್ಷಿತ ಅಸಂಘಟಿತರಿಂದ ಅವರಿಗೆ ಯಾವ ಬಾಧಕವೂ ಇಲ್ಲದುದೂ ಒಂದು ಕಾರಣವಾಗಿರಬಹುದು. ಅದೇನೇ ಇದ್ದರೂ "ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳು" ಬ್ರಿಟಿಷರ ಕಾಲದಲ್ಲಿ ಜಿಲ್ಲೆ ಮತ್ತು ತಾಲೂಕು ಮಂಡಳಿಗಳಿಗೆ ಮಾತ್ರ ಸೀಮಿತವಾಗಿದ್ದವು. ಸ್ವಾತಂತ್ರ್ಯನಂತರವೂ ಅವು ಕಾರ್ಪೊರೇಷನ್, ಮುನಿಸಿಪಾಲಿಟಿಗಳಿಗೆ ಮಾತ್ರ ಸೀಮಿತವಾಗಿವೆ. ಇವು ಕೇವಲ "ಪಟ್ಟಣ ಸ್ವರಾಜ್ಯ ಸಂಸ್ಥೆಗಳು". ಹಳ್ಳಿಗಾಡಿನ ಸ್ವರಾಜ್ಯ ಸಂಸ್ಥೆಗಳು ಇವುಗಳಿಂದ ಪ್ರೇರಣೆ ಪಡೆದಿರಬಹುದು.

"ಸಮುದಾಯದೇಳ್ಗೆ"ಶಬ್ದವು ಪಂಚವಾರ್ಷಿಕ ಯೋಜನೆಯ ಹೊಳವಿನಲ್ಲಿ ಮೂಡಿ ಬಂದ ಹಲವು "ಸಿಹಿಶಬ್ದ"ಗಳಲ್ಲಿ ಇದೂ ಒಂದು. ೧೯೫೨ರಲ್ಲಿ ಈ ಶಬ್ದ ಒಂದು ನಿರ್ದಿಷ್ಟ ರೂಪ, ರೇಷೆಯನ್ನು ಪಡೆಯಿತು. ರಾಷ್ಟ್ರೀಯ ಅಭಿವೃದ್ಧಿ ಮಂಡಳಿ

(National Development Council) ಯಿಂದ ಪ್ರೇರೇಪಿತ ಯೋಜನೆಯಿದು. ಸಮುದಾಯದೇಳ್ಗೆಯು ಸಂಬಂಧ ಪಂಚ ವಾರ್ಷಿಕ ಯೋಜನೆಗಳು ಹಲವಾರು ಯೋಜನೆಗಳನ್ನು ಕೈ ಕೊಂಡಾಗ್ಗೆ ಅವುಗಳ ಮೌಲ್ಯಮಾಪನ, ತೌಲನೀಕರಣದ ದೃಷ್ಟಿ ಯಿಂದ ಹೊರಬಂದ ಯೋಜನೆಯಿದು, ಶಬ್ದವಿದು. "ಸರ್ವೇ ಜನಾಃ ಸುಖಿನೋ ಭವಂತು" ಎಂಬ ಗುರಿಯನ್ನು ಹೊಂದಿರು ವುದು ಈ "ಸಮುದಾಯದೇಳ್ಗೆ". ಇದು ಹಳ್ಳಿಗಾಡಿನ ಸಮು ದಾಯದ ಆರ್ಥಿಕ, ಸಾಮಾಜಿಕ, ರಾಜಕೀಯ, ಕಲ್ಯಾಣಕಾರಕ ಮುಂತಾದ ಸರ್ವಾಂಗೀಣ ಏಳ್ಗೆಯತ್ತ ತನ್ನ ಗುರಿ ಯನ್ನಿಟ್ಟಿದೆ. ಈ ಕಾರ್ಯಕ್ಕಾಗಿಯೇ ಪ್ರತಿಯೊಂದು ಪಂಚ ವಾರ್ಷಿಕ ಯೋಜನೆಯಲ್ಲಿ ಕೆಲವೊಂದು ಹಣವನ್ನು ತೆಗೆದಿಡ ಲಾಗುವುದು. ಈ ಸಮುದಾಯದೇಳ್ಗೆಯ ರಾಜಕೀಯ ಅಂಗವೇ ಪಂಚಾಯತ ಆಡಳಿತ ಎಂದರೆ ತಪ್ಪಾಗಲಾರದು. "ಸಮುದಾಯದೇಳ್ಗೆ" ಅನಿರ್ದಿಷ್ಟವಾದ ವಿಶಾಲಾರ್ಥವನ್ನು ಹೊಂದಿದೆ. ಪಂಚಾಯತ ಆಡಳಿತಕ್ಕೆ ಸ್ಥಾನಿಕವಾಗಿ, ಆಡಳಿ ತಾತ್ಮಕವಾಗಿ ಒಂದು ನಿರ್ದಿಷ್ಟತೆ ಇದೆ.

"ಪಂಚಾಯತ ಆಡಳಿತ"ವು ಹಳ್ಳಿಗಾಡಿನ ರಾಜಕೀಯ ಆಡಳಿತವನ್ನು ಸೂಚಿಸುವುದು. ಸ್ವಾತಂತ್ರ್ಯಾನಂತರದಲ್ಲಿ, ಅದ ರಲ್ಲಿಯೂ ಮುಖ್ಯವಾಗಿ ಭಾರತ ಸರಕಾರವು ನೇಮಿಸಿದ ಬಳವಂತರಾಯ ಮೆಹತಾ ಕಮೀಟಿಯ ವರದಿ (೧೯೫೭) ಯ ನಂತರದಲ್ಲಿ ಹೆಚ್ಚು ಪ್ರಚಲಿತದಲ್ಲಿ ಬಂದಿತು. ಹಳ್ಳಿಗಾಡಿನ

ಆಡಳಿತವನ್ನು ಜಿಲ್ಲೆ, ತಾಲೂಕು, ಹಳ್ಳಿಗಳ- ಮೂರು ಹಂತದಲ್ಲಿ ಪ್ರಜಾಪ್ರಭುತ್ವವಾದಿ, ವಿಕೇಂದ್ರೀಕರಣದ ತತ್ವದ ಮೇಲೆ ನಡೆಸುವುದು— ಈ "ಪಂಚಾಯತ ಆಡಳಿತ"ದ ಮೂಲ ತತ್ವ. ರೂಪರೇಷೆಯಾಗಿದೆ. ಸ್ವಾತಂತ್ರ್ಯಾನಂತರದ ಭಾರತದ ಹೊಸ ಕೊಡುಗೆ ಇದು ಪಂಚಾಯತ ಆಡಳಿತಕ್ಕೆ. ಇದೇ ಹಳ್ಳಿಗಾಡಿನ ಸರ್ವತೋಮುಖ ಅಭಿವೃದ್ಧಿಯನ್ನು ಪ್ರಜಾಸತ್ತಾತ್ಮಕವಾಗಿ ಹೊಂದುವತ್ತ ಇವರ ಗುರಿ ಇದೆ. ಅರ್ಥಾತ್ "ಪಂಚಾಯತ ಆಡಳಿತ"ದ ಗುರಿಯು "ಸಮುದಾಯದೇಳ್ಗೆ"ಯಾಗಿದೆ. ಮೊದಲನೆಯದು ಸಾಧನ ಎರಡನೆಯದು ಸಾಧ್ಯ.

"ಪಂಚಾಯತ" (ಪಂಚ + ಆಯತ) ಶಬ್ದವು ಬಹುಶಃ ಭಾರತದ ಇತಿಹಾಸದುದ್ದಕ್ಕೂ ಅದರ ಸಂಸ್ಕೃತಿಯುದ್ದಕ್ಕೂ ಬಂದಿರಬಹುದು. "ಪಂಚ ಪರಮೇಶ್ವರ" ಶಬ್ದ ಭಾರತ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿದೆ. ಐವರು ಹಿರಿಯರು ಹೇಳಿದ್ದೇ ಮಾನ್ಯ, ನ್ಯಾಯ, ನಿರ್ಣಯ, ಸತ್ಯ ಎಲ್ಲವೂ. ಈ ತತ್ವದ ಮೇಲೆಯೇ ಇತ್ತೀಚಿನ ನ್ಯಾಯಾಲಯಗಳು ಸ್ಫೂರ್ತಿ ಪಡೆದಿರಬಹುದು. ಇತಿಹಾಸದುದ್ದಕ್ಕೂ ಹಳ್ಳಿಗಳು ತಮ್ಮವೇ ಆದ ಗಣತಂತ್ರವನ್ನು ಪಡೆದಿದ್ದವು. ಅವು ಎಲ್ಲ ರೀತಿಯಿಂದಲೂ ಸ್ವಯಂ ಪರಿಪೂರ್ಣವಾಗಿದ್ದವು. ತಮ್ಮ ಆಡಳಿತವನ್ನು ತಾವೇ ನಡೆಸುತ್ತಿದ್ದವು. ವಾದ ವಿವಾದಗಳಿಗೆ ಆಯಾ ಹಳ್ಳಿಯ ಪಂಚ ಪರಮೇಶ್ವರರೇ ತೀರ್ಪು ನೀಡುತ್ತಿದ್ದರು. ಆಗ್ಗೆ "ಪಂಚ" ಶಬ್ದವು ಸಾಂಖ್ಯಿಕವಾಗಿದ್ದರೆ ಈಗ ಅದು ಸದಸ್ಯತ್ವವನ್ನು

ಸೂಚಿಸುವುದು. ಈಗಿನ "ಪಂಚ"- ಎಂದರೆ ಹಳ್ಳಿಯ ಪಂಚಾಯತದ ಒಬ್ಬ ಸದಸ್ಯ ಎಂಬರ್ಥ. ಹಿಂದೆ ಹಳ್ಳಿಯ ಐದು ಹಿರಿಯರು ಕೂಡಿದ ಸಭೆ- ಪಂಚಾಯತ ಎನಿಸಿಕೊಳ್ಳುತ್ತಿತ್ತು. ಬಹುಶಃ ಈ ಹಿರಿಯರು ತಮ್ಮ ಸಂಪತ್ತು.ಜಾತಿ. ದರ್ಜೆ, ವಯಸ್ಸು, ಗುಣಗಳ ಮೇಲೆ ಆಧಾರಿತವಾಗಿದ್ದರು. ಗ್ರಾಮದ ಗುಡಿಯಲ್ಲಿಯೋ. ಅಥವಾ ಗ್ರಾಮದ ಮಧ್ಯದ ಅಥವಾ ಹೊರಗಿನ ಅರಳಿಯ ಗಿಡದ ಕೆಳಗಿನ ಕಟ್ಟೆಯ ಮೇಲೆಯೋ ಇವರ ಸಭೆ ಜರುಗುತ್ತಿದ್ದವು. ಅವುಗಳಿಗೆ ತಮ್ಮವೇ ಆದ ವಿಧಿ ನಿಯಮಗಳಿದ್ದವು. ಅವನ್ನು ಅವರೆಲ್ಲ ಪಾಲಿಸುತ್ತಿದ್ದರು ಪಾಲಿಸದವರು ಪಂಚರು ನೀಡಿದ ಶಿಕ್ಷೆಗೆ ಒಳಗಾಗುತ್ತಿದ್ದರು ಪ್ರಾಚೀನ ಕಾಲದಿಂದ ಭಾರತದ ಸ್ವಾತಂತ್ರ್ಯದವರೆಗೆ ಸಾಮಾನ್ಯವಾಗಿ ನಡೆದು ಬಂದ ಹಳ್ಳಿಯ ಆಡಳಿತದ ಕಥೆಯಿದು. ಇದರಿಂದ ಕಹಿ ಉಂಡವರ ವ್ಯಥೆಯೂ ಇಲ್ಲಿ ಕಾಣುವುದು ಸ್ವಾಭಾವಿಕ. ಆಧುನಿಕ ಪ್ರಜಾಪ್ರಭುತ್ವವಾಗಲಿ. ನ್ಯಾಯಾಲಯಗಳ ಆಶ್ರಯವಾಗಲಿ ಅವಕ್ಕೆ ಇರಲಿಲ್ಲ.

ಸದ್ಯಕ್ಕೆ "ಪಂಚಾಯತ" ಎಂದರೆ ಗ್ರಾಮದ ಜನತೆಯ ಪ್ರತಿನಿಧಿಗಳ ಸಭೆ. ಇದು ಒಂದು ಗ್ರಾಮಕ್ಕೆ ಮಾತ್ರ ಸೀಮಿತವಾಗಿದ್ದರೆ "ಗ್ರಾಮ ಪಂಚಾಯತ"ವೆನಿಸುವುದು. ಹಲವು ಚಿಕ್ಕ ಗ್ರಾಮಗಳಿಗೆ ಒಂದು ಇಂಥ ಸಭೆ ಇದ್ದರೆ ಅದಕ್ಕೆ "ಗುಂಪು ಪಂಚಾಯತ" (Group Panchayat) ಅಥವಾ "ಮಂಡಲ ಪಂಚಾಯತ" ಎನ್ನುವರು. ಅದೇ ರೀತಿ "ನಗರ ಪಂಚಾಯತ"

(Town Panchayat) ದೊಡ್ಡ ಹಳ್ಳಿಯಲ್ಲಿರಬಹುದು. ಪ್ರತಿಯೊಂದು ಹಳ್ಳಿಗೆ ತನ್ನದೇ ಆದ ಒಂದು ಪಂಚಾಯತ ಇರುವುದು ಒಳ್ಳೆಯದು. ಒಂದು ಹಳ್ಳಿಯ ಐವರು ಹಿರಿಯರ ಸಭೆ ಎಂಬ ಹಳೆಯ ರೂಢಿಯೂ ಈಗಿನ ಪಂಚಾಯತದಲ್ಲೂ ಬಂದರೆ ತಪ್ಪಿಲ್ಲ. ಆದರೆ ಅದು ಕಾಯದೆಬದ್ಧವಾಗಿ. ಪ್ರಜಾಪ್ರಭುತ್ವಯುತವಾಗಿ. ಅಧುನೀಕರಣಗೊಳ್ಳಬೇಕು.

ಸ್ವಾತಂತ್ರ್ಯಾನಂತರ. ಬಳವಂತರಾಯ ಮೆಹತಾ ಕಮಿಟಿಯ ವರದಿಯ ಮೇರೆಗೆ ಬಂದ "ಪಂಚಾಯತ ರಾಜ" ಅಥವಾ "ಪಂಚಾಯತ ಆಡಳಿತ"ವು ಮೂರು ಹಂತಗಳ ಗ್ರಾಮ. ತಾಲೂಕು ಮತ್ತು ಜಿಲ್ಲೆಗಳ ಆಡಳಿತವನ್ನು ಹೊಂದಿರುವುದು. "ಪಂಚಾಯತ" ಎಂದರೆ ಸರಳ ಅರ್ಥವಲ್ಲಿ ಒಂದು ಹಳ್ಳಿಯ ಪಂಚಾಯತ ಅಥವಾ ಗ್ರಾಮ ಪಂಚಾಯತ. "ಪಂಚಾಯತ ರಾಜ" ಅಥವಾ "ಪಂಚಾಯತ ಆಡಳಿತ"ವೆಂದರೆ ಈ ಮೂರೂ ಹಂತಗಳನ್ನು ಅಳವಡಿಸಿಕೊಂಡ ಆಡಳಿತದ ವಿಧಾನವು. "ಪಂಚಾಯತ"ವು "ಪಂಚಾಯತ ಆಡಳಿತ"ದ ಮೂರರಲ್ಲಿಯ ಅತಿ ಚಿಕ್ಕದಾದ ಒಂದು ಅಂಗ. ಕರ್ನಾಟಕವಲ್ಲಿ ಅಶೋಕ ಮೆಹ್ತಾರವರ ವರದಿಯನ್ನಾಧರಿಸಿ ಪಂಚಾಯತ ಆಡಳಿತಕ್ಕೆ ಹೊಸ ರೂಪರೇಷೆಯನ್ನು ಕೊಡಲಾಗಿದೆ. ಮಂಡಲ ಪಂಚಾಯತ ಮತ್ತು ಜಿಲ್ಲಾ ಪರಿಷತ್ತುಗಳ ಕಾಯ್ದೆ ಜಾರಿಯಲ್ಲಿ ಬಂದಿದೆ.

## ೩. ಪಂಚಾಯತ ಆಡಳಿತದ ಐತಿಹಾಸಿಕ ಹಿನ್ನೆಲೆ

ಭಾರತದ ಸ್ವಾತಂತ್ರ್ಯದವರೆಗೆ ಪಂಚಾಯತ ಆಡಳಿತ ಎಂದರೆ ಗ್ರಾಮ ಪಂಚಾಯತದ ಆಡಳಿತ ಮಾತ್ರವಾಗಿತ್ತು. ಇತ್ತೀಚೆಗೆ ಬಳವಂತರಾಯ ಮೆಹತಾ ಕಮೀಟಿಯ ವರದಿಯ ನಂತರ ಪಂಚಾಯತ ಆಡಳಿತ ಎಂದರೆ ಹಳ್ಳಿಗಾಡಿನ ಮೂರು ಹಂತಗಳ ಗ್ರಾಮ, ತಾಲೂಕು, ಜಿಲ್ಲೆಯ ಮಟ್ಟದ ಆಡಳಿತ ವೆಂದರ್ಥ.

ಭಾರತ ಇತಿಹಾಸದ ದಾಖಲೆಗೆ ಸಿಕ್ಕ ಅತಿ ಪ್ರಾಚೀನ ಸಂಸ್ಕೃತಿಯೆಂದರೆ ಕ್ರಿ. ಶ. ಪೂ. ಸುಮಾರು ೫೦೦೦ ವರ್ಷಗಳಲ್ಲಿದ್ದ ಸಿಂಧೂ ನದಿಯ ದಡದಲ್ಲಿಯ ಹರಪ್ಪಾ, ಮೊಹೆಂಜೋದಾರೊ ಗಳಲ್ಲಿ ಸಿಕ್ಕ ಅವಶೇಷಗಳ ಪ್ರಕಾರ ದ್ರಾವಿಡ ಸಂಸ್ಕೃತಿ. ಈ ಸಂಸ್ಕೃತಿಯ ಇತಿಹಾಸದ ಪ್ರಕಾರ ನಗರಗಳ ವಿಶಾಲವಾದ ರಸ್ತೆ, ಒಳಚರಂಡಿಯ ಯೋಜನೆ, ಸ್ನಾನದ ಘಾಟಗಳು ಆಗಿನ ನಗರಾಡಳಿತದ ಮಾಹಿತಿಯನ್ನು ಸೂಚಿಸುವವು. ಅಗ್ಗೆ ಗ್ರಾಮ, ಅಥವಾ ನಗರದ ಆಡಳಿತ ಎಷ್ಟು ಸುಧಾರಿಸಿದುದಾಗಿತ್ತೆಂಬುದು ವಿದಿತವಾಗುವುದು. ಈಗಿನ ನಗರ ಯೋಜನೆ (Town Planning) ಭಾರತಕ್ಕೆ ಹೊಸದಲ್ಲ ಅದು ದ್ರಾವಿಡ ಸಂಸ್ಕೃತಿಯಿಂದಲೂ ರೂಢಿಗತವಾಗಿ ಬಂದಿದೆ ಎಂದು ಹೇಳಬಹುದು.

ಭಾರತದ ಇತಿಹಾಸಕ್ಕೆ ಹೊಸ ತಿರುವು ನೀಡಿದುದು ಆರ್ಯರ ಆಗಮನವು. ಮಧ್ಯ ಏಶಿಯಾ ಅಥವಾ ಮಂಗೋಲಿಯಾದಿಂದ ಭಾರತದ ಬೋಲನ್ ಖೈಬರದ ಮುಖಾಂತರ

ಕ್ರಿ. ಶ. ಪೂ. ಸುಮಾರು ೨೦೦೦ ವರ್ಷಗಳ ಹಿಂದೆ ಬಂದ ಈ ಆರ್ಯರು ದ್ರಾವಿಡರನ್ನು ಸೋಲಿಸಿ ತಮ್ಮ ಪ್ರಭುತ್ವವನ್ನು ಸಾಧಿಸಿದರಲ್ಲದೆ ಚತುರ್ವರ್ಣವೆಂಬ ವರ್ಗ ವಿಂಗಡಣೆಯನ್ನು ಸಮಾಜದಲ್ಲಿ ಮುಂದೆ ಮಾಡಿ, ಒಡೆದಾಳುವ ನೀತಿಯ ಮುಖಾಂತರ ತಮ್ಮ ಹೇಳಿಕೆಯನ್ನು ಬೇರೂರಿಸಿಕೊಂಡರು. ಆ ಪಿಡುಗು ಇಂದಿಗೂ ಭಾರತದ ಸಮಾಜಕ್ಕೆ ಅಂಟಿಕೊಂಡಿದೆ. ಈ ವರ್ಗ ವ್ಯವಸ್ಥೆಯು ಜಾತಿ, ಉಪಜಾತಿಗಳೆಂದು ಬೆಳೆದು ಇಡೀ ದೇಶದ ತುಂಬ ವಿಷಜಾಲವನ್ನು ಹಬ್ಬಿಸಿಬಿಟ್ಟಿದೆ. ಗ್ರಾಮದಾಡಳಿತದಿಂದ ರಾಷ್ಟ್ರದಾಡಳಿತದವರೆಗೆ ಈ ಜಾಲವು, ಎಲ್ಲರಿಗೂ, ಎಲ್ಲ ರೀತಿಯಿಂದ ತೊಡಕನ್ನುಂಟು ಮಾಡುತ್ತಿರುವುದು. ಅಶಿಕ್ಷಿತ ಹಳ್ಳಿಗಾಡಿನಲ್ಲಂತೂ ಈ ವಿಷವು ಮಡುಗಟ್ಟಿ ನಿಂತಿದೆ. ಆರ್ಯರು ಈ ವಿಷದ ಜೊತೆಗೆ ವೇದ, ಉಪನಿಷತ್ತು, ಅರಣ್ಯಕ ಮುಂತಾದ ಒಳ್ಳೆಯ ಸಾಹಿತ್ಯವನ್ನು ನೀಡಿದರು. ಈ ಸಾಹಿತ್ಯವನ್ನು ಅವಲೋಕಿಸಿದರೆ ಪಂಚಾಯತ ಆಡಳಿತವು ಅವ್ಯಾಹತವಾಗಿ ಭಾರತದಲ್ಲಿ ನಡೆದು ಬಂದುದು ಗೋಚರಿಸುವುದು. ವಾಲ್ಮೀಕಿಯ ರಾಮಾಯಣದಲ್ಲಿ"ಜನಪದ" ಶಬ್ದ ಉಪಯೋಗಿಸಲಾಗಿದೆ.[೪] ಇದನ್ನು "ಜನತೆ". "ಸಾರ್ವಜನಿಕ ಅಭಿಪ್ರಾಯ". "ರಾಷ್ಟ್ರೀಯತೆ" ಎಂಬರ್ಥದಲ್ಲಿ ನಾವೀಗ ಉಪಯೋಗಿಸಬಹುದು. ಜನತೆಯ ಸಾರ್ವಭೌಮತ್ವವನ್ನು ಈ ಶಬ್ದ ಸೂಚಿಸಬಹುದು. ಗ್ರಾಮದಾಡಳಿತದಿಂದ ರಾಷ್ಟ್ರದ

---

೪ ಪಿ. ಮಾಹೇಶ್ವರಿ, —Studies in Panchayat Raj.

ಆಡಳಿತದವರೆಗೆ "ಜನಪದ"ಕ್ಕೆ ಮಾನ್ಯತೆ ಇತ್ತು ಎಂಬುದು ಸ್ಪಷ್ಟ. ಅಷ್ಟರಮಟ್ಟಿಗೆ ಆಗ್ಗೆ ಪ್ರಜಾಪ್ರಭುತ್ವವು ಅರಸು ಪ್ರಭುತ್ವದ ಚೌಕಟ್ಟಿನಲ್ಲಿ ಕಾರ್ಯ ಮಾಡುತ್ತಿತ್ತೆಂದು ಹೇಳ ಬಹುದು. ವ್ಯಾಸ ಮಹಾಭಾರತದಲ್ಲಿ "ಗ್ರಾಮಸಂಘ" ಶಬ್ದದ ಬಳಕೆಯಾಗಿದೆ.[೫] ಇದು ಗ್ರಾಮಪಂಚಾಯತವೇ ಎಂದು ಹೇಳ ಬಹುದು. ಅದೇ ರೀತಿ ಜಟಕಾದಲ್ಲಿ "ಗ್ರಾಮಸಭಾ"ದ ಬಳಕೆ ಯಾಗಿದೆ.[೬] ಈ ಗ್ರಾಮ ಸಭೆಗಳೇ ಈಗ ಒಂದು ರೀತಿಯಲ್ಲಿ ಲೋಕಸಭೆಯ ಮೂಲಬೇರುಗಳು.

ಮೌರ್ಯರ ಆಡಳಿತದಲ್ಲಿ ಗ್ರಾಮಪಂಚಾಯತಗಳು ಹೆಚ್ಚು ಸ್ವಾಯತ್ತತೆಯನ್ನು ಪಡೆದಿದ್ದವು.[೭] ಕೇಂದ್ರಾಡಳಿತವು ಗ್ರಾಮದಾಡಳಿತದಲ್ಲಿ ಕೈಹಾಕುತ್ತಿರಲಿಲ್ಲ. ಅಲ್ಲದೆ ಆಗ್ಗೆ ಗ್ರಾಮ ಗಳು ಹೆಚ್ಚು ಸ್ವಯಂ ಪರಿಪೂರ್ಣವಾಗಿದ್ದವು. ಆಗ್ಗೆ ಸಾರಿಗೆಯ ಸೌಕರ್ಯದ ಕೊರತೆ ಇದ್ದುದು ಈ ಸ್ವಯಂಪರಿಪೂರ್ಣತೆಗೆ. ಸ್ವಯಂ ಆಡಳಿತಕ್ಕೆ. ಅರ್ಥಾತ್ ಸ್ವರಾಜ್ಯಕ್ಕೆ ಹೆಚ್ಚು ಪುಷ್ಟಿ ಕೊಟ್ಟಿರಬಹುದು. ಚಾರ್ಲ್ಸ್ ಮೆಟ್‌ಕಾಫರ್ ದೃಷ್ಟಿಯಲ್ಲಿ ಗ್ರಾಮಗಳು ಒಡೆಯಲಾರದ ಅತಿ ಚಿಕ್ಕ ಅಣುಗಳಾಗಿದ್ದವಲ್ಲದೆ. ಅವು ಚಿಕ್ಕ ಗಣತಂತ್ರಗಳಾಗಿದ್ದವು. ಒಟ್ಟಿನಲ್ಲಿ. ಪ್ರಾಚೀನ ಹಾಗೂ ಮಧ್ಯ ಕಾಲದಲ್ಲಿದ್ದ ಭಾರತದ ಗ್ರಾಮ ಪಂಚಾಯತ

---

೫ ಬಿ. ಮಾಹೇಶ್ವರಿ Studies in Panchayat Raj.

೬ ಅದೇ.

೭ ಪ್ರೊ. ದೀಕ್ಷಿತಾರ. —The Mouryan Polity. ೧೯೩.

ಗಳು ಹೆಚ್ಚು ಪ್ರಭಾವಯುತವಾಗಿದ್ದವೆನ್ನಲಡ್ಡಿಯಿಲ್ಲ.[೮] ಅವು ತಮ್ಮ ಗ್ರಾಮಗಳ ಆರ್ಥಿಕ, ನೈತಿಕ ಹಾಗೂ ಬೌದ್ಧಿಕ ಬೆಳವಣಿಗೆಯತ್ತ ತಮ್ಮ ಗುರಿಯನ್ನಿಟ್ಟಿದ್ದವು.

ಗುಪ್ತರ ಕಾಲವು ಭಾರತದ ಇತಿಹಾಸದಲ್ಲಿ ಸುವರ್ಣಕಾಲವೆನಿಸಿತ್ತು. ಗ್ರಾಮದಾಡಳಿತೆಯಿಂದ ರಾಜ್ಯದಾಡಳಿತವರೆಗೆ ಸುವ್ಯವಸ್ಥೆ ಆಗ್ಗ ನೆಲೆಸಿತ್ತು. ಆರರಿಂದ ಒಂಭತ್ತನೆಯ ಶತಮಾನದವರೆಗೆ ಪಂಚಾಯತಗಳು ಜೀವಂತ ಸಂಸ್ಥೆಗಳಾಗಿದ್ದವು.[೯] ಅವು ಹಿರಿಯರ ಮಂಡಳಿಗಳಾಗಿದ್ದವು. ಮುಸ್ಲಿಮರ ಆಡಳಿತದಲ್ಲಿ (೧೩ ರಿಂದ ೧೮ನೆಯ ಶತಮಾನದವರೆಗೆ)ಭಾರತದ ಮಧ್ಯಕಾಲವು ಸೈನಿಕಾಡಳಿತಕ್ಕೆ ಒಳಪಟ್ಟಿತ್ತು. ಆಸ್ತಿ, ಸ್ವಾತಂತ್ರ್ಯ, ಧರ್ಮ, ಸಂಸ್ಕೃತಿಯ ರಕ್ಷಣೆಯು ಭಾರತೀಯರ ಮೂಲ ಗುರಿಯಾಗಿತ್ತು. ಪಂಚಾಯತ ಆಡಳಿತವು ಆ ಕಾರಣದಿಂದ ಕುಂಠಿತವಾಗಿತ್ತೆನ್ನಲಡ್ಡಿಯಿಲ್ಲ. ಬ್ರಿಟಿಷರಾಳ್ವಿಕೆಯಲ್ಲಿ (ಸುಮಾರು ೧೮ ರಿಂದ ೨೦ನೆಯ ಶತಮಾನ), ರಾಷ್ಟ್ರೀಯತೆ, ಸ್ವಾತಂತ್ರ್ಯಗಳ ಸುಳಿಗಾಳಿ ಬೀಸತೊಡಗಿದವು. ಬ್ರಿಟಿಷರು ಪ್ರತ್ಯಕ್ಷವಾಗಿ ಬ್ರಿಟಿಷ ಭಾರತವನ್ನು ಹಾಗೂ ಅಪ್ರತ್ಯಕ್ಷವಾಗಿ ಭಾರತೀಯ (ಅಳರಸರ) ಭಾರತವನ್ನು ಆಳಿದರು. ಬ್ರಿಟಿಷ ಭಾರತದಲ್ಲಿ ರಾಷ್ಟ್ರೀಯತೆ

---

೮ ಪ್ರೊ. ಅಲ್ತೇಕರ,ಮೇಲೆ ಬಂದಿದೆ.

೯ ಲಾರ್ಡ ಹೇಲಿ. "ಮುನ್ನುಡಿ". —Foundations of Local Self-Government in India, Pakistan and Burma," by Hugh Tinker,

ಹಾಗೂ ಸ್ವಾತಂತ್ರ್ಯದ ಕಲ್ಪನೆಗಳು ಬೆಳೆದು ಜನತೆ ಸುಧಾರಣೆಯತ್ತ ಮುನ್ನಡೆ ಸಾಧಿಸಲಿಕ್ಕೆ ಹತ್ತಿತು. ತಮ್ಮ ಆಳ್ವಿಕೆಗೆ ಅನುಕೂಲವಾಗುವಂತೆ ಬ್ರಿಟಿಷರು ಬ್ರಿಟಿಷ್ ಭಾರತದಲ್ಲಿ, ಶಿಕ್ಷಣ, ಸಾರಿಗೆ ಸಂಪರ್ಕ, ಉದ್ಯಮ, ಇಂಗ್ಲೀಷ ಭಾಷೆ, ವೈಜ್ಞಾನಿಕತೆ, ಆಡಳಿತ ಸುಧಾರಣೆಗಳನ್ನು ತಂದರು. ಡಿವಿಜನ್, ಜಿಲ್ಲೆ, ತಾಲೂಕು ಮುಂತಾದ ಆಡಳಿತದ ಅಂಗಗಳನ್ನು ಬ್ರಿಟಿಷ ಭಾರತದಲ್ಲಿ ರೂಪಿಸಿದರು. ಇಂದಿಗೂ ಅದೇ ಆಡಳಿತ ವಿನ್ಯಾಸವನ್ನು ಭಾರತದುದ್ದಕ್ಕೂ ಕಾಣುವೆವು. ಜಿಲ್ಲೆ, ತಾಲೂಕುಗಳ ಸ್ಥಾನಗಳು ಶಹರಗಳಾಗಿ ಶಿಕ್ಷಣ ಕೇಂದ್ರಗಳಾಗಿ, ಉದ್ಯಮಸ್ಥಾನಗಳಾಗಿ, ಸಾರಿಗೆ ಸಂಪರ್ಕಗಳನ್ನು ಹೊಂದಿ ಸುಧಾರಿತ ವೈಜ್ಞಾನಿಕ ಸಂಸ್ಕೃತಿಯನ್ನು ಪಡೆದವು. ರಾಜಕೀಯವಾಗಿಯೂ ಜಿಲ್ಲಾ, ತಾಲೂಕು ಮಂಡಳಿಗಳನ್ನು ಪಡೆದು ಪ್ರಜಾಪ್ರಭುತ್ವವನ್ನು ಭಾರತೀಯರಿಗೆ ಮನನಮಾಡುವತ್ತ ಮುಂದಾದವು. ೧೯೦೯ರ ಭಾರತೀಯ ಮಂಡಳಿಗಳ ಕಾಯ್ದೆಗನುಗುಣವಾಗಿ ಈ ಪಟ್ಟಣದ ಮಂಡಳಿಗಳು ಸಂಪೂರ್ಣ ಸ್ವಾಯತ್ತತೆಯನ್ನು ಪಡೆಯುವತ್ತ ಸಫಲವಾದವು. ಒಟ್ಟಿನಲ್ಲಿ ಬ್ರಿಟಿಷರು ಪಟ್ಟಣ ಪ್ರಜಾಪ್ರಭುತ್ವವನ್ನು (Urban Democracy) ಭಾರತಕ್ಕೆ ನೀಡಿದರು. ಆದರೆ ಅವರು ಹಳ್ಳಿಗಾಡಿನ ಪ್ರಜಾಪ್ರಭುತ್ವಕ್ಕೆ ಅಷ್ಟೊಂದು ಲಕ್ಷ್ಯ ಕೊಟ್ಟಂತೆ ಕಾಣಲಿಲ್ಲ. ಆ ಕಾರ್ಯವನ್ನು ಸ್ವತಂತ್ರ ಭಾರತಕ್ಕೆ ಬಿಟ್ಟುಕೊಟ್ಟಂತಿತ್ತು.

ಲಾರ್ಡ ರಿಪ್ಪನ್ನನು, ಭಾರತದ ಆಡಳಿತದಲ್ಲಿ, ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳ ಜನಕನು. ಆತನು ಮೇ ೧೮, ೧೮೮೨ರಲ್ಲಿ

ಈ ಸಂಸ್ಥೆಗಳ ಠರಾವನ್ನು ಪಾಸುಮಾಡಿ, ಜಾರಿಯಲ್ಲಿ ತಂದನು. ಆಗಿನಿಂದ ಬ್ರಿಟಿಷ ಭಾರತದಲ್ಲಿ ಜಿಲ್ಲೆ, ತಾಲೂಕು ಮಂಡಳಿಗಳ ಜಾಲವು ಹಬ್ಬಿತು. ೧೮೯೨ರ ಭಾರತೀಯ ಮಂಡಳಿಗಳ ಕಾಯ್ದೆಯು ಕೆಲ ಸುಧಾರಣೆ ಮಾಡಿದರೆ, ೧೯೦೯ರ ಕಾಯ್ದೆಯು ಈ ಮಂಡಳಿಗಳಿಗೆ ಸ್ವಾಯತ್ತತೆಯನ್ನು ನೀಡಿತಲ್ಲದೆ, ಚುನಾವಣೆಗಳ ಮುಖಾಂತರ ನಾಗರಿಕರು ತಮ್ಮ ಪ್ರತಿನಿಧಿಗಳನ್ನು ಆರಿಸುವ ಪ್ರಜಾಪ್ರಭುತ್ವ ಪದ್ಧತಿಯನ್ನು ಪ್ರಥಮವಾಗಿ ಒದಗಿಸಿತು. ಆಗಸ್ಟ ೨೦, ೧೯೧೭ರಲ್ಲಿ ಆಗ್ಗೆ ಭಾರತಕ್ಕೆ ಸಂಬಂಧಿಸಿದ ಬ್ರಿಟಿಷ ಮಂತ್ರಿಯಾದ (Secretary of State for India) ಮೊಂಟೇಗ್ಯು ಬ್ರಿಟಿಷ್ ಸಂಸತ್ತಿನ ಕೆಳಮನೆಯಲ್ಲಿ "ಭಾರತದಲ್ಲಿ ಜವಾಬ್ದಾರ ಸರಕಾರವನ್ನು ತರುವತ್ತ ಹಂತ ಹಂತವಾಗಿ ಸ್ವರಾಜ್ಯ ಸಂಸ್ಥೆಗಳನ್ನು ಬೆಳೆಸುವುದು ಬ್ರಿಟಿಷ್ ಸರಕಾರದ ನೀತಿಯಾಗಿದೆ"- ಎಂದು ಘೋಷಿಸಿದುದು ಭಾರತದ ಆಡಳಿತಕ್ಕೆ ಹೊಸ ತಿರುವನ್ನು ಹಾಗೂ ಭಾರತ ರಾಷ್ಟ್ರೀಯರಿಗೆ ಹೊಸ ಚೈತನ್ಯವನ್ನು ನೀಡಿತು. ಈ ಘೋಷಣೆಯು ಪ್ರಣಾಳಿಕೆಯ ಮೇಲೆ ಹಾಗೂ ಮೊಂಟೇಗ್ಯು ಚೇಮ್ಸಫರ್ಡ ಸುಧಾರಣೆಗಳನ್ನಾಧರಿಸಿಕೊಂಡು ಬಂದ ೧೯೧೯ರ ಭಾರತ ಸರಕಾರದ ಕಾಯ್ದೆಯು ಸ್ಥಾನಿಕ ಸಂಸ್ಥೆಗಳಿಗೆ ಹೆಚ್ಚು ಸ್ವಾಯತ್ತತೆಯನ್ನು ನೀಡಿತು. ಈ ಕಾಯ್ದೆಯ ಮೇರೆಗೆ ಸ್ಥಾನಿಕ ಸ್ವರಾಜ್ಯ ಆಡಳಿತವನ್ನು ಪ್ರಾಂತಿಕ ಭಾರತೀಯ ಮಂತ್ರಿಗಳಿಗೆ ವರ್ಗಾಯಿಸಲ್ಪಟ್ಟಿತು. ಪ್ರಾಂತಿಕ ಆಡಳಿತದಲ್ಲಿ ಕಾಯ್ದಿಟ್ಟ ವಿಷಯಗಳು ಬ್ರಿಟಿಷರ ಕೈಯಲ್ಲಿಯೂ, ವರ್ಗಾಯಿಸಲ್ಪಟ್ಟ

ವಿಷಯಗಳು ಭಾರತೀಯರ ಕೈಯಲ್ಲಿಯೂ ಬಂದವು. ಇದಕ್ಕೆ ದ್ವಿವಿಧ ಆಳ್ವಿಕೆ (Dyarchy) ಎಂದು ಹೆಸರಿತ್ತು. ೧೯೩೫ರ ಭಾರತೀಯ ಸರಕಾರದ ಕಾಯ್ದೆಯ ಮೇರೆಗೆ ಇಡೀ ಬ್ರಿಟಿಷ್ ಪ್ರಾಂತಿಕ ಆಡಳಿತವು ಸ್ವಾಯತ್ತತೆಯನ್ನು ಪಡೆದದ್ದು ಭಾರತದ ಆಡಳಿತದಲ್ಲಿಯೇ ಒಂದು ಮೈಲುಗಲ್ಲು. ಕೇಂದ್ರದಲ್ಲಿ ಈ ಕಾಯ್ದೆಯ ಮೇರೆಗೆ ದ್ವಿವಿಧ ಆಳ್ವಿಕೆಗೆ ಅವಕಾಶ ದೊರಕಿತು. ಸಂಯುಕ್ತತೆ ಹಾಗೂ ಸಂಯುಕ್ತ ನ್ಯಾಯಾಲಯಗಳು ಇನ್ನುಳಿದ ಸುಧಾರಣೆಗಳಲ್ಲಿ ಮುಖ್ಯವಾದವುಗಳು. ೧೯೪೭ರ ಕೊನೆಯ ಭಾರತೀಯ ಸರಕಾರದ ಕಾಯ್ದೆಯು ಲಂಡನ್‌ದಲ್ಲಿಯ ಭಾರತ ಆಫೀಸನ್ನು ಮುಚ್ಚಿಸಿ ಭಾರತಕ್ಕೆ ಸ್ವಾತಂತ್ರ್ಯವನ್ನು ಸಾರಿತು.

ಬ್ರಿಟಿಷರಾಳ್ವಿಕೆಯಲ್ಲಿ ಗ್ರಾಮ ಪಂಚಾಯತಗಳು ನಿರ್ಲಕ್ಷಿಸಲ್ಪಟ್ಟಿದ್ದವೆನ್ನಲಡ್ಡಿಯಿಲ್ಲ. ಆಗ್ಗೆ ಹಳ್ಳಿಗಳಲ್ಲಿ ಗೌಡ, ಕುಲಕರ್ಣಿಗಳ ದಬ್ಬಾಳಿಕೆ ಹಾಗೂ ಸುಲಿಗೆಗಳು ಸಾಮಾನ್ಯವಾಗಿರಬಹುದು. ಬ್ರಿಟಿಷರಾಳ್ವಿಕೆಯ ಪೂರ್ವದಲ್ಲಿಯ ಹಾಗೂ ಸ್ವಾತಂತ್ರ್ಯ ನಂತರದ ಪಂಚಾಯತಗಳಿಗೆ ಭಿನ್ನವಾದ ಹೊಸಬಗೆಯ "ಗೌಡ ಪಂಚಾಯತ"ವು ಈ ಬ್ರಿಟಿಷರಾಳ್ವಿಕೆಯಲ್ಲಿತ್ತು. ಕಾಯ್ದೆ ಸುವ್ಯವಸ್ಥೆಯು ಆ ಪಂಚಾಯತದ ಮೂಲಗುರಿಯಾಗಿತ್ತು. ಹಳ್ಳಿ ಹಾಗೂ ಬ್ರಿಟಿಷ್ ಸರಕಾರದ ಮಧ್ಯ ಗೌಡನು ಕೊಂಡಿಯಾಗಿದ್ದನು.

ಸ್ವಾತಂತ್ರ್ಯನಂತರದಲ್ಲಿ ಪಂಚಾಯತ ಆಡಳಿತವು ಹೊ ರೂಪರೇಷೆಯನ್ನು ಪಡೆಯಿತು. ಗಾಂಧೀವಾದ, ಸಮಾಜವಾ

ಸಮುದಾಯದೇಳ್ಗೆ. ಪ್ರಜಾಪ್ರಭುತ್ವವಾದಿ ವಿಕೇಂದ್ರೀಕರಣ. ಹಳ್ಳಿಗಳ ಅಭ್ಯುದಯ. ಹಳ್ಳಿಗಾಡಿನ ಪ್ರಜಾಪ್ರಭುತ್ವ. ಸ್ವರಾಜ್ಯ. ಸಮುದಾಯದೇಳ್ಗೆ. ರಾಮರಾಜ್ಯ. ಕಲ್ಯಾಣರಾಜ್ಯ ಪಂಚವಾರ್ಷಿಕ ಯೋಜನೆಗಳು. ಮುಂತಾದ ಧ್ಯೇಯೋದ್ದೇಶಗಳನ್ನು ಕ್ರೋಢೀಕರಿಸಿ ಕೊಂಡು ಮುನ್ನಡೆಯುವ ಆದರ್ಶವನ್ನು ಈಗಿನ ಪಂಚಾಯತ ಆಡಳಿತವು ಹೊಂದಿದೆ. ಆ ದಿಶೆಯತ್ತ ಸಧ್ಯದ ಸಂವಿಧಾನವು (೧೯೫೦)ತನ್ನ ನಾಲ್ಕನೆಯ ವಿಭಾಗದಲ್ಲಿ (ರಾಜ್ಯನೀತಿಯ ಮಾರ್ಗದರ್ಶಿ ತತ್ವಗಳು) ೪೦ನೆಯ ಕಲಮಿನಲ್ಲಿ ಹಳ್ಳಿಯ ಪಂಚಾಯತನ್ನು ಸ್ವರಾಜ್ಯದ ಅಂಗವನ್ನಾಗಿಸಲು ಸೂಚಿಸುತ್ತದೆ. ಈ ಮಾರ್ಗದರ್ಶನದ ಮೇರೆಗೆ ಪ್ರಥಮ ಪಂಚವಾರ್ಷಿಕ ಯೋಜನೆಯ ಕೊನೆಯಲ್ಲಿ (೧೯೫೬), ಸುಮಾರು ೧, ೨೨. ೬೭೦ ಹಳ್ಳಿ ಪಂಚಾಯತಗಳು ಅಸ್ತಿತ್ವದಲ್ಲಿ ಬಂದವು. ಅಂದರೆ ದೇಶದಲ್ಲಿಯ ಅರ್ಧಕ್ಕಿಂತ ಹೆಚ್ಚು ಹಳ್ಳಿಗಳು ಪಂಚಾಯತದ ಆಡಳಿತಕ್ಕೆ ಒಳಪಟ್ಟವು. ಇನ್ನುಳಿದ ಹಳ್ಳಿಗಳು ಎರಡನೆಯ ಪಂಚವಾರ್ಷಿಕ ಯೋಜನೆಯಲ್ಲಿ ಪಂಚಾಯತ ಆಡಳಿತಕ್ಕೆ ಒಳಪಟ್ಟವು.

ಕೇಂದ್ರ ಸರಕಾರವು ಬಳವಂತರಾಯ ಮೆಹತಾರವರ ಅಧ್ಯಕ್ಷತೆಯಲ್ಲಿ ಪ್ರಜಾಪ್ರಭುತ್ವವಾದಿ ವಿಕೇಂದ್ರೀಕರಣದ ಸಂಬಂಧ ವರದಿಯನ್ನು ಒಪ್ಪಿಸಲು ಒಂದು ಮಂಡಳಿಯನ್ನು ನಿಯಮಿಸಿತು. ಅದರಲ್ಲಿ ಡಾ. ಎಸ್. ಡಿ. ಶರ್ಮಾ. ಮಧ್ಯಪ್ರದೇಶದ ಮಂತ್ರಿಗಳು; ಠಾಕೂರ ಫೂಲಸಿಂಗ. ಉತ್ತರ ಪ್ರದೇಶದ ಉಪ

ಮಂತ್ರಿಗಳು; ಮತ್ತು ಶ್ರೀ ಬಿ. ಜಿ. ರಾವ್, ಮಧ್ಯಪ್ರದೇಶ ಸರಕಾರದ ಹಿಂದಿನ ಮುಖ್ಯ ಕಾರ್ಯದರ್ಶಿಗಳು; ಇನ್ನುಳಿದ ಸದಸ್ಯರಾಗಿದ್ದರು. ಆ ಮಂಡಳಿಯು ಮೂರು ಸಂಪುಟದಲ್ಲಿ ತನ್ನ ವರದಿಯನ್ನು ಒಪ್ಪಿಸಿತು (೧೯೫೭). ಅದರೊಂದಿಗೆ ಶ್ರೀ ಬಿ. ಜಿ. ರಾವ್‌ರ ವಿರುದ್ಧ ಸೂಚನೆಯೂ ಸೇರಿತ್ತು. ರಾಷ್ಟ್ರೀಯ ಅಭಿವೃದ್ಧಿ ಮಂಡಳಿಯು ಈ ವರದಿಯನ್ನು ಸಾಮಾನ್ಯವಾಗಿ ಒಪ್ಪಿಕೊಂಡು ಅದನ್ನು ಜಾರಿಯಲ್ಲಿ ತರಲು ರಾಜ್ಯಗಳಿಗೆ ತಿಳಿಸಿತು (೧೯೫೮).

ಬಳವಂತರಾಯ ಮೆಹತಾರ ವರದಿಯ ಪ್ರಕಾರ ಪಂಚಾಯತ ಆಡಳಿತವು ಮೂರು ಹಂತಗಳದ್ದಾಗಿದೆ– ಹಳ್ಳಿಯ ಪಂಚಾಯತ. ತಾಲೂಕಿನ ಹಳ್ಳಿಗಾಡಿನ ಆಡಳಿತ ಹಾಗೂ ಇಡೀ ಜಿಲ್ಲೆಯ ಎಲ್ಲ ಹಳ್ಳಿಗಾಡಿನ ಆಡಳಿತ. ಒಟ್ಟಿನಲ್ಲಿ ಇದು ಹಳ್ಳಿಗಾಡಿನ ಪ್ರಜಾಪ್ರಭುತ್ವವಾದಿ ಆಡಳಿತ. ಪ್ರಜಾಪ್ರಭುತ್ವದ ಮೂಲ ಬೇರುಗಳು ಹಳ್ಳಿಗಳವರೆಗೂ ಇಳಿಯಬೇಕೆಂಬುದು ಈ ಪ್ರಜಾಪ್ರಭುತ್ವವಾದಿ ವಿಕೇಂದ್ರೀಕರಣದ ಮೂಲ ಉದ್ದೇಶ. ಅಂದರೆ ರಾಜಕೀಯ ಆಡಳಿತದ ಜೊತೆಗೆ ಪಂಚವಾರ್ಷಿಕ ಯೋಜನೆಗಳನ್ನು ಹಳ್ಳಿಗಾಡಿನಲ್ಲಿ ಕಾರ್ಯರೂಪದಲ್ಲಿ ತಂದು ಸಮುದಾಯದೇಳ್ಗೆಯನ್ನು ಸರ್ವಾಂಗೀಣವಾಗಿ ಸಾಧಿಸಿ. ರಾಮರಾಜ್ಯ, ಕಲ್ಯಾಣರಾಜ್ಯವನ್ನು ಅಲ್ಲಿ ನೆಲೆಗೊಳಿಸಬೇಕೆಂಬ ಧ್ಯೇಯೋದ್ದೇಶ ಹೊಂದಿತ್ತು.

೧೯೫೯ರಲ್ಲಿ, ಮಹಾತ್ಮಾ ಗಾಂಧೀಜಿಯವರ ಜನ್ಮದಿನದಂದು (ಅಕ್ಟೋಬರ ೨), ಭಾರತದ ಆಗಿನ ಪ್ರಧಾನಿ ಪಂ.ಜವಾಹರಲಾಲ

ನೆಹರೂರವರು ನಾಗೌರ (ರಾಜಸ್ಥಾನ)ದಲ್ಲಿ ಪಂಚಾಯತ ಆಡಳಿತದ ಜ್ಯೋತಿಯನ್ನು ಬೆಳಗಿ ಉದ್ಘಾಟಿಸಿ, ಸಂತಸ ಹಾಗೂ ಸಮೃದ್ಧಿಯು ಮೊಳೆಯಬೇಕೆನ್ನುತ್ತ ಹಳ್ಳಿಗಾಡು ಹೆಜ್ಜೆ ಹಾಕಲಿ ಹಾರೈಸಿದರು. ಮುಂದೆ ಪ್ರತಿಯೊಂದು ರಾಜ್ಯವು ಪಂಚಾಯತ ಆಡಳಿತವನ್ನು ತಮ್ಮಲ್ಲಿ ಜಾರಿಯಲ್ಲಿ ತಂದವು. ನವೆಂಬರ ೧, ೧೯೫೯ರಲ್ಲಿ ಮೈಸೂರು, ಮತ್ತು ಆಂಧ್ರ ರಾಜ್ಯಗಳು ಪಂಚಾಯತ ಆಡಳಿತವನ್ನು ಜಾರಿಯಲ್ಲಿ ತಂದವು.[೧೧] ಮದ್ರಾಸ ರಾಜ್ಯವು (ಈಗಿನ ತಮಿಳುನಾಡು) ಅಕ್ಟೋಬರ ೨, ೧೯೬೦ರಲ್ಲಿ ತನ್ನಲ್ಲಿ ಪಂಚಾಯತ ಆಡಳಿತವನ್ನು ಜಾರಿಯಲ್ಲಿ ತಂದಿತು. ಡಿಸೆಂಬರ ೧೯೬೦ರಲ್ಲಿ ಮೈಸೂರು ರಾಜ್ಯ (ಸದ್ಯ ಕರ್ನಾಟಕ) ದಲ್ಲಿ ಆಗಿನ ಭಾರತ ರಾಷ್ಟ್ರಾಧ್ಯಕ್ಷರಾದ ಡಾ. ಬಾಬುರಾಜೇಂದ್ರ ಪ್ರಸಾದರು ಪಂಚಾಯತ ಆಡಳಿತವನ್ನು ಉದ್ಘಾಟಿಸಿದರು. ಭಾವನಗರದ ಕಾಂಗ್ರೆಸ್ ಅಧಿವೇಶನವು ಪಂಚಾಯತ ಆಡಳಿತವನ್ನು ತೀವ್ರಗತಿಯಲ್ಲಿ ರಾಜ್ಯಗಳು ಜಾರಿಯಲ್ಲಿ ತರಬೇಕೆಂದು ಆದೇಶ ನೀಡಿತು ೧೯೬೨ರ ಕೊನೆಯ ಒಳಗೆ ೯ ರಾಜ್ಯಗಳು (ರಾಜಸ್ಥಾನ, ಆಂಧ್ರ, ಆಸ್ಸಾಮ. ಮದ್ರಾಸ. ಮೈಸೂರು. ಒರಿಸ್ಸಾ, ಪಂಜಾಬ, ಉತ್ತರ ಪ್ರದೇಶ ಮತ್ತು ಮಹಾರಾಷ್ಟ್ರ) ಪಂಚಾಯತ ಆಡಳಿತವನ್ನು

---

೧೧ Karnataka Act No. 10 of 1959. The Karnataka 'Village Panchayats and Local Boards Act. 1959. ಇದಕ್ಕೆ ರಾಷ್ಟ್ರಾಧ್ಯಕ್ಷರ ಒಪ್ಪಿಗೆಯು ೧೬ ಜುಲೈ ೧೯೫೯ ರಲ್ಲಿ ಸಿಕ್ಕಿತು.ಕರ್ನಾಟಕ ಗೆಜೆಟ್ಟಿನಲ್ಲಿ ಪ್ರಥಮವಾಗಿ ೨೩ ಜುಲೈ ೧೯೫೯ರಲ್ಲಿ ಪ್ರಕಟಿಸಲ್ಪಟ್ಟಿತು.

ಜಾರಿಯಲ್ಲಿ ತಂದವು. ಎರಡನೆಯ ಪಂಚವಾರ್ಷಿಕ ಯೋಜನೆಯ ಕೊನೆಯಲ್ಲಿ ಮಾರ್ಚ ೧೯೬೨ರಲ್ಲಿ ೯೪% ಹಳ್ಳಿಗಳು ಪಂಚಾಯತ ಆಡಳಿತಕ್ಕೆ ಒಳಪಟ್ಟವು.[೧೧] ಸದ್ಯಕ್ಕೆ ದೇಶದ ಎಲ್ಲ ಹಳ್ಳಿಗಳೂ ಪಂಚಾಯತ ಆಡಳಿತಕ್ಕೆ ಒಳಪಟ್ಟಿರುವವು.

ಕೇಂದ್ರ ಜನತಾ ಸರಕಾರವು (೧೯೭೭) ಪಂಚಾಯತ ಆಡಳಿತವನ್ನು ಅಭ್ಯಸಿಸಿ ಅದರ ಬಗೆಗೆ ವರದಿಯನ್ನು ಒಪ್ಪಿಸಲು ೧೪ ಸದಸ್ಯರುಳ್ಳ ಅಶೋಕ ಮೆಹ್ತಾ ಸಮಿತಿಯನ್ನು ನೇಮಿಸಿತು. ಆ ಸಮಿತಿಯು ೨೧–೮–೧೯೭೮ ರಂದು ತನ್ನ ವರದಿಯನ್ನು ಒಪ್ಪಿಸಿತು. ಇದರಲ್ಲಿ ಮಂಡಳ ಪಂಚಾಯತ ಮತ್ತು ಜಿಲ್ಲಾ ಪರಿಷತ್ತುಗಳೆಂಬ ಎರಡು ಹಂತದ ಆಡಳಿತವನ್ನು ಸೂಚಿಸಲಾಗಿದೆ. ತಾಲೂಕು ಅಭಿವೃದ್ಧಿ ಮಂಡಳಿಯನ್ನು ತೆಗೆದುಹಾಕಿ ಅದರ ಅಧಿಕಾರವನ್ನು ಮಂಡಳ ಪಂಚಾಯತಗಳಿಗೆ ವರ್ಗಾಯಿಸಲು ಹೇಳಿದೆ.

ಕರ್ನಾಟಕ ರಾಜ್ಯ ಸರಕಾರವು ನೇಮಿಸಿದ (೧೯೬೩) ಕೊಂಡಜ್ಜಿ ಬಸಪ್ಪ ಸಮಿತಿಯು ತನ್ನ ವರದಿಯಲ್ಲಿ ಜಿಲ್ಲಾ ಅಭಿವೃದ್ಧಿ ಮಂಡಲದ ಸ್ಥಾನದಲ್ಲಿ ಜಿಲ್ಲಾ ಪರಿಷತ್ತನ್ನು ತರಲು ಸೂಚಿಸಿತ್ತು. ನ್ಯಾಯ ಪಂಚಾಯತಗಳನ್ನೂ ಸಹ ತರಲು ಅದು ಸೂಚಿಸಿತ್ತು. ಆದರೆ ಆಗಿನ ಕಾಂಗ್ರೆಸ್ ಸರಕಾರವು

---

೧೧ The Times of India, 8–12–1962, ದ ಪ್ರಕಾರ, ಆಗ್ಗೆ ೨,೦೩,೦೦೦ ಪಂಚಾಯತಗಳು, ೨,೧೨,೦೦೦ ಹಳ್ಳಿಯ ಸಹಕಾರ ಸಂಘಗಳು ಮತ್ತು ೫,೨೦೦ ವಿಭಾಗಗಳು (Blocks) ಇದ್ದವು.

ಈ ವರದಿಯ ಆಧಾರದ ಮೇಲೆ ಮಸೂದೆಯನ್ನು ಅಂಗೀಕರಿಸಿದ್ದರೂ (೧೯೭೪) ಅದನ್ನು ಕಾರ್ಯರೂಪದಲ್ಲಿ ತಂದಿರಲಿಲ್ಲ.

ಮಂಡಳ ಪಂಚಾಯತ ಮತ್ತು ಜಿಲ್ಲಾ ಪರಿಷತ್ತಿನ ಹೊಸ ಮಸೂದೆಯು ಕರ್ನಾಟಕ ಗೆಜೆಟ್ಟಿನಲ್ಲಿ ೨೩–೬–೧೯೮೩ರಲ್ಲಿ ಪ್ರಕಟವಾಯಿತು. ರಾಜ್ಯ ಶಾಸನಾಂಗದ ಜಂಟಿ ಸಮಿತಿಯು ಈ ಸಂಬಂಧ ೨೯ ಸಲ ಸಭೆ ಸೇರಿ ಮತ್ತು ಪಶ್ಚಿಮ ಬಂಗಾಲ, ಮಹಾರಾಷ್ಟ್ರ, ಗುಜರಾಥ ಮತ್ತು ಆಂಧ್ರ ರಾಜ್ಯಗಳಿಗೆ ಭೆಟ್ಟಿ ಕೊಟ್ಟು ಅಭ್ಯಸಿಸಿ ೧೯–೧–೮೪ ರಂದು ತನ್ನ ವರದಿಯನ್ನು ಒಪ್ಪಿಸಿತು. ೧೬–೭–೮೫ ರಂದು ಹೊಸ ವಿಧೇಯಕಕ್ಕೆ ರಾಷ್ಟ್ರಾಧ್ಯಕ್ಷರ ಅಂಕಿತ ಬಿದ್ದಿತು. ೧೪–೮–೮೫ರಂದು ಕರ್ನಾಟಕದಲ್ಲಿ ಇದು ಜಾರಿಯಲ್ಲಿ ಬಂದಿತು. ಜನವರಿ ೨. ೧೯೮೭ ರಂದು ಜಿಲ್ಲಾ ಪರಿಷತ್ತುಗಳಿಗೂ ಹಾಗೂ ಜನೇವರಿ ೨೦, ೧೯೮೭ರಂದು ಮಂಡಳ ಪಂಚಾಯತಗಳಿಗೂ ಪ್ರಥಮ ಚುನಾವಣೆಗಳು ನಡೆದವು. ಇದೊಂದು ಕರ್ನಾಟಕದ ಪಂಚಾಯತ ಆಡಳಿತದಲ್ಲಿ ಹೊಸ ಅಧ್ಯಾಯ.

## ೪. ಧ್ಯೇಯೋದ್ದೇಶಗಳು

ಭಾರತವು ಹಳ್ಳಿಗಳ ನಾಡಾಗಿದ್ದುದರಿಂದ, ಹಳ್ಳಿಗಳ ಏಳ್ಗೆಯೇ ಭಾರತದ ನಿಜವಾದ ಏಳ್ಗೆ. ಹಳ್ಳಿಗಳ ಸರ್ವಾಂಗೀಣ ಉನ್ನತಿಯು ಈ ಪಂಚಾಯತ ಆಡಳಿತದ ಮುಖ್ಯ ಗುರಿ. ಹಳ್ಳಿಗರನ್ನು ರಾಜಕೀಯವಾಗಿ, ಆಡಳಿತಾತ್ಮಕವಾಗಿ, ಶೈಕ್ಷಣಿಕವಾಗಿ, ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ ಮುಂದೆ ತಂದು, ಇಡೀ

ಭಾರತದ ಹಳ್ಳಿಗಾಡನ್ನು ಅಭಿವೃದ್ಧಿಯತ್ತ ಸಮೃದ್ಧಿ. ಸುಖ. ಶಾಂತಿಯತ್ತ ಮುನ್ನಡೆಸುವುದು ಇದರ ಉದ್ದೇಶ.

ರಾಜಕೀಯವಾಗಿ, ಪ್ರಜಾಪ್ರಭುತ್ವವಾದಿ ವಿಕೇಂದ್ರೀಕರಣದ ಮೂಲಕ ಪ್ರತಿಹಳ್ಳಿಗೂ ಸ್ವರಾಜ್ಯ, ಸ್ವಾತಂತ್ರ್ಯ, ಸ್ವಾಯತ್ತತೆಯನ್ನು ನೀಡುವುದು ಮುಖ್ಯ ಉದ್ದೇಶ. ತನ್ನನ್ನು ತಾನು ಆಳಿಕೊಳ್ಳುವುದು. ತನ್ನ ಆಶೋತ್ತರಗಳಿಗೆ ಅನುಗುಣವಾಗಿ ತನ್ನ ಯೋಜನೆಗಳನ್ನು ಹಮ್ಮಿಕೊಳ್ಳುವುದು, ತನ್ನ ಸ್ಥಾನಿಕ ಸಮಸ್ಯೆಗಳನ್ನು ತಾನು ಸ್ವತಃ ಪಾಲುಗೊಂಡು ಬಗೆಹರಿಸಿಕೊಳ್ಳುವುದು. ತಾನೂ ದೇಶದ ಒಂದು ಅವಿಭಾಜ್ಯ ಅಂಗ, ತನಗೂ ಸ್ವಾತಂತ್ರ್ಯವಿದೆ ಎಂಬ ಭಾವನೆಗಳನ್ನು ಪ್ರತಿಯೊಬ್ಬ ಹಳ್ಳಿಗನಲ್ಲಿ ಕುದುರಿಸುವುದು ಈ ಪಂಚಾಯತ ಆಡಳಿತದ ಧ್ಯೇಯೋದ್ದೇಶವಾಗಿದೆ. ಹಳ್ಳಿಗಳಲ್ಲಿ ಪ್ರಜಾಪ್ರಭುತ್ವದ ಸರಿಯಾದ ತಳಹದಿ ಬಿದ್ದರೆ ದೇಶದ ಪ್ರಜಾಪ್ರಭುತ್ವವು ಯಶಸ್ಸು ಹೊಂದುವುದು. ಗ್ರಾಮಸಭೆಗಳು, ವಿಧಾನಸಭೆಗಳು ಮತ್ತು ಲೋಕಸಭೆಯು ಅನುಕ್ರಮವಾಗಿ ಹಳ್ಳಿಗಳ, ರಾಜ್ಯಗಳ ಮತ್ತು ದೇಶದ ಆಶೋತ್ತರಗಳನ್ನು ಪ್ರತಿಬಿಂಬಿಸುವ ಕನ್ನಡಿಗಳಾದರೆ ಪ್ರಜಾಪ್ರಭುತ್ವಕ್ಕೆ ಬೆಲೆ ಬರುವುದು. ಈ ರೀತಿಯ ಗ್ರಾಮರಾಜ್ಯವೇ ರಾಮರಾಜ್ಯ ಹಾಗೂ ಕಲ್ಯಾಣ ರಾಜ್ಯವು. ಅದುವೇ ಗಾಂಧೀವಾದವು. ಜಯಪ್ರಕಾಶ ನಾರಾಯಣರ ದೃಷ್ಟಿಯಲ್ಲಿ ಇದೊಂದು ರಾಜಕೀಯ ಕ್ರಾಂತಿಯು. ಆತನ ಸಮಗ್ರ ಕ್ರಾಂತಿಗೆ ಪಂಚಾಯತ ಆಡಳಿತವು ಒಂದು ಉತ್ತಮ ಮಾಧ್ಯಮ. ಹೆರಾಲ್ಡ್ ಜೆ. ಲಾಸ್ಕಿಯವರ

ಪ್ರಕಾರ ವಿಕೇಂದ್ರೀಕರಣವು ಹೆಚ್ಚಾದಂತೆ ಪ್ರಜಾಪ್ರಭುತ್ವವು ಸಹ ಹೆಚ್ಚು ಮೆರುಗನ್ನು ಪಡೆಯುವುದು. ಒಂದು ದೃಷ್ಟಿಯಲ್ಲಿ ಪಂಚಾಯುತ ಆಡಳಿತವು ಪ್ರಜಾಪ್ರಭುತ್ವ ಶಿಕ್ಷಣದ ಪ್ರಾಥಮಿಕ ಶಾಲೆಯಿದ್ದಂತೆ. ಹಳ್ಳಿಗರಿಗೆ ಪ್ರಜಾಪ್ರಭುತ್ವ, ಪ್ರತಿನಿಧಿ, ಚುನಾವಣೆ, ಮತ, ಮತಾಧಿಕಾರ, ಸಾರ್ವಭೌಮತ್ವ, ಸರಕಾರ, ಹಕ್ಕು ಬಾಧ್ಯತೆಗಳು, ಸ್ವಾತಂತ್ರ್ಯ ಮತ್ತು ಸಮಾನತೆ, ಮುಂತಾದವುಗಳ ಸರಿಯಾದ ರಾಜಕೀಯ ಶಿಕ್ಷಣ ಈ ಪಂಚಾಯುತದಿಂದ ಸಿಗುವುದು. ಈ ಪರಿಣತಿಯು ವಿಧಾನಸಭಾ ಮತ್ತು ಲೋಕಸಭೆಯ ಪ್ರತಿನಿಧಿಗಳನ್ನು ಆಯ್ಕೆಮಾಡುವಾಗ ಹೆಚ್ಚು ಅನುಕೂಲವಾಗುವುದು. ಒಟ್ಟಿನಲ್ಲಿ ರಾಜಕೀಯ ಶಿಕ್ಷಣ, ತರಬೇತಿ, ಹಾಗೂ ಜ್ಞಾನ ಇಲ್ಲಿ ಲಭಿಸುವವು. ಪಂಚಾಯುತ ಆಡಳಿತದ ರಾಜಕೀಯ ಧ್ಯೇಯೋದ್ದೇಶವೇ ಇದು.

ಆಡಳಿತಾತ್ಮಕವಾಗಿ, ತಮ್ಮಲ್ಲಿದ್ದ ನಿರ್ದಿಷ್ಟ ಸಂಪನ್ಮೂಲಗಳನ್ನು ಕ್ರೋಢೀಕರಿಸಿ ತಮ್ಮ ಆಶೋತ್ತರಗಳಿಗನುಗುಣವಾಗಿ ತಮ್ಮ ಹಳ್ಳಿಯ ಸುಖ, ಶಾಂತಿ ಸಮೃದ್ಧಿಯನ್ನು ಹೊಂದುವುದು ಈ ಪಂಚಾಯುತ ಆಡಳಿತದ ಗುರಿ. ಹಳ್ಳಿಯ ಆಡಳಿತದಲ್ಲಿ ಭಾಗಿಯಾಗಿ, ಅಥವಾ ಅದಕ್ಕೆ ಸಹಕಾರಿಯಾಗಿ ಅದರ ಆಗುಹೋಗುಗಳನ್ನು ತಿಳಿದುಕೊಳ್ಳುವತ್ತ ಇದು ಆಡಳಿತಾತ್ಮಕ ಶಿಕ್ಷಣ, ತರಬೇತಿ ಹಾಗೂ ಜ್ಞಾನವನ್ನು ನೀಡುವುದು. ಸರಪಂಚ, ಪಂಚ, ಕಾರ್ಯದರ್ಶಿ ಮುಂತಾದ ಹಳ್ಳಿಯ ಪಂಚಾಯುತದ ಆಡಳಿತ ವರ್ಗದ ಬಗೆಗೆ, ನಂತರ ತಾಲೂಕು ಹಾಗೂ ಜಿಲ್ಲಾ

ಮಟ್ಟದ ಆಡಳಿತದ ಬಗೆಗೆ, ಹಾಗೂ ಅವರ ಮೇಲಿನ ರಾಜ್ಯ ಹಾಗೂ ಕೇಂದ್ರಾಡಳಿತ. ಹಾಗೂ ಅವೆಲ್ಲವುಗಳ ಮಧ್ಯದಲ್ಲಿಯ ಸಂಬಂಧ, ಸಹಕಾರದ ಅರಿವು ಹಳ್ಳಿಗಾಡಿನ ಜನತೆಗೆ ಈ ಪಂಚಾಯತ ಆಡಳಿತದಿಂದ ಲಭಿಸುವುದು. ಈ ಆಡಳಿತದಲ್ಲಿಯ ಸಾಧಕ, ಬಾಧಕಗಳ ಅರಿವು ಹಳ್ಳಿಗರಿಗೆ ಆಗುವುದು. ಆ ಅರಿವೇ ಅವರಿಗೆ ಗುರುವಾಗುವುದು ತಮ್ಮ ಯಶಸ್ಸಿನ ಮಾರ್ಗ ತೋರಿಸಲು. ಒಳ್ಳೆಯ ಮುಖಂಡರನ್ನು ಆರಿಸುವುದು. ನೈಪುಣ್ಯತೆಯ ಕಾರ್ಯದರ್ಶಿ, ಕಾರಕೂನ, ಶಿಪಾಯಿಗಳನ್ನು ನಿಯಮಿಸುವುದು. ಜನತೆಯ ಹಾಗೂ ಮೇಲಾಧಿಕಾರಿಗಳ ಸಹಕಾರ, ಸಹಾಯವನ್ನು ಪಡೆಯುವುದು ಮುಂತಾದ ಆಡಳಿತದ ವಿಷಯಗಳ ಅರಿವು ಹಳ್ಳಿಗಾಡಿಗೆ ಆಗುವುದು. ಅದು ಇಡೀ ದೇಶದ ಆಡಳಿತಕ್ಕೇ ಅನುಕೂಲವಾಗುವುದು. ಕರ್ನಾಟಕವು ಮಂಡಲ ಪಂಚಾಯತ ಹಾಗೂ ಜಿಲ್ಲಾ ಪರಿಷತ್ತುಗಳಿಗಾಗಿ ಒಂದು ಪ್ರತ್ಯೇಕವಾದ ಸೇವಾವರ್ಗವನ್ನೇ ತಯಾರಿಸಲು ನಿರ್ಧರಿಸಿವೆ.

ಆರ್ಥಿಕವಾಗಿ, ಹಳ್ಳಿಗಾಡಿನ ಯೋಜಿತ ಅಭಿವೃದ್ಧಿಯನ್ನು ಹೊಂದುವುದು ಪಂಚಾಯತದ ಘನ ಉದ್ದೇಶವಾಗಿದೆ. ಹಳ್ಳಿಗಾಡು ಅಭಿವೃದ್ಧಿ ಹೊಂದಿದರೆ ದೇಶವೇ ಅಭಿವೃದ್ಧಿ ಹೊಂದುವುದು. ಪಂಚವಾರ್ಷಿಕ ಯೋಜನೆಗಳು, ದೇಶದ ಅಭಿವೃದ್ಧಿ ಮಂಡಳ (National Development Councll) ರಾಷ್ಟ್ರೀಯ ವಿಸ್ತರಣಾ ಯೋಜನೆಗಳು(National Extension Schemes) ಸಮುದಾಯ ಅಭಿವೃದ್ಧಿ ಯೋಜನೆಗಳು (Community Deve-

lopment Programme) ಮುಂತಾದ ಯೋಜನೆಗಳಿಗೆ ಸಂಬಂಧಿಸಿದ ಮಂಡಳಿಗಳು ಇದನ್ನು ಮನಗಂಡಿವೆ. ಹಳ್ಳಿಗಾಡಿನಲ್ಲಿ ಲಭ್ಯವಿರುವ ಎಲ್ಲ ಆರ್ಥಿಕ, ನೈಸರ್ಗಿಕ, ಮಾನಸಿಕ, ಬೌದ್ಧಿಕ ಸಂಪತ್ತುಗಳನ್ನು ಯೋಜನಾಬದ್ಧವಾಗಿ ಸಹಕಾರದ ತಳಹದಿಯ ಮೇಲೆ ಕ್ರೋಢೀಕರಿಸಿ ಹಳ್ಳಿಗಾಡನ್ನು ಅಭಿವೃದ್ಧಿ ಪಡಿಸುವುದು ಅತ್ಯವಶ್ಯ. ಆ ದಿಶೆಯತ್ತ ಪಂಚಾಯತ ಆಡಳಿತದ ಗುರಿ ಇದೆ.[೧೨] ಹಳ್ಳಿಗಾಡಿನ ಅಭಿವೃದ್ಧಿಗಾಗಿ ರಾಜ್ಯ ಸರಕಾರ, ಜಿಲ್ಲಾ, ತಾಲೂಕುಗಳ ಕಚೇರಿಗಳು ಹಾಗೂ ಬ್ಯಾಂಕುಗಳ ಸಹಕಾರ, ನೆರವು, ಮಾರ್ಗದರ್ಶನ ತಕ್ಕೊಂಡು ಗುರಿ ಸಾಧಿಸುವುದು ಅತ್ಯವಶ್ಯ. ಕೃಷಿರಂಗ, ಸಣ್ಣ ದೊಡ್ಡ ನೀರಾವರಿ, ಚಿಕ್ಕ, ದೊಡ್ಡ ಉದ್ಯಮಗಳು, ಮುಂತಾದವುಗಳ ಅಭಿವೃದ್ಧಿಗಾಗಿ ಯೋಜನಾಬದ್ಧವಾದ ಕಾರ್ಯಕ್ರಮಗಳು ಅತ್ಯವಶ್ಯ. ಒಟ್ಟಿನಲ್ಲಿ ಪಂಚಾಯತವು ಹಳ್ಳಿಗಾಡಿನ ಸಂಪೂರ್ಣ ಹೊಣೆಯನ್ನು ಜೀವ ವಿಮೆಯೋಪಾದಿಯಲ್ಲಿ ಹೊರಬೇಕಾಗಿದೆ.[೧೩] ಕರ್ನಾಟಕದಲ್ಲಿ ಮಂಡಳ ಪಂಚಾ

---

೧೨ ಸ್ಥಾನಿಕ ಸಂಪನ್ಮೂಲಗಳನ್ನು ಒಂದೆಂದಿಗಿಂತಲೂ ಹೆಚ್ಚಾಗಿ ಅಭಿವೃದ್ಧಿಯತ್ತ ತೊಡಗಿಸುವುದೇ ಪಂಚಾಯತ ಆಡಳಿತದ ಮುಖ್ಯ ಉದ್ದೇಶವಾಗಿದೆಯೆಂದು ಪ್ರೊ. ಟಿ. ಕೃಷ್ಣಮಾಚಾರಿ ಮಂಡಳಿಯು (೧೯೬೨) ಅಭಿಪ್ರಾಯ ಪಟ್ಟಿದೆ.

೧೩ ಮದ್ರಾಸ ರಾಜ್ಯದ ಪಂಚಾಯತ ಸಮ್ಮೇಳನವು (ಅಕ್ಟೋಬರ ೧೯೬೧) ಯೋಜನೆಗಳು ಸಂಪನ್ಮೂಲಗಳನ್ನು ಎತ್ತುವುದು ಮತ್ತು ರಚನಾತ್ಮಕ ಉದ್ದೇಶಕ್ಕಾಗಿ ಹಳ್ಳಿಯ ಒಗ್ಗಟ್ಟಿಗೆ ಸಂಬಂಧಿಸಿದ ಮೂರು ಠರಾವುಗಳನ್ನು ಪಾಸುಮಾಡಿತು.

ಯತ, ತಾಲೂಕ ಪಂಚಾಯತ ಸಮಿತಿ ಹಾಗೂ ಜಿಲ್ಲಾ ಪರಿಷತ್ತುಗಳು ಈ ಹೊಣೆಯನ್ನು ಹೊತ್ತಿವೆ.

ಶೈಕ್ಷಣಿಕವಾಗಿ. ಪಂಚಾಯತವು ತನ್ನದೇ ಆದ ಉದ್ದೇಶವನ್ನು ಇಟ್ಟುಕೊಂಡಿದೆ. ಹಳ್ಳಿಯ ಶಾಲೆಗಳನ್ನು ಪಂಚಾಯತಗಳಿಗೆ ಒಪ್ಪಿಸಬೇಕೆಂಬ ಕೆಲವರ ಅಭಿಪ್ರಾಯವಿದೆ. ಕರ್ನಾಟಕದ ಹೊಸ ವಿಧೇಯಕವು (೧೯೮೫) ಪಂಚಾಯತಗಳಿಗೆ ಮೇಲ್ವಿಚಾರಣಾ ಅಧಿಕಾರ ನೀಡಿದೆ. ಹಳ್ಳಿಗಳಲ್ಲಿಯ ಶಾಲೆಗಳು ಸುವ್ಯವಸ್ಥಿತವಾಗಿ, ರಚನಾತ್ಮಕವಾಗಿ ಹಾಗೂ ಯೋಜನಾ ಬದ್ಧವಾಗಿ ನಡೆಯುವಂತೆ ಶಿಕ್ಷಕರು, ವಿದ್ಯಾರ್ಥಿಗಳು ಹಾಗೂ ಪಾಲಕರಲ್ಲಿ ಮನಪರಿವರ್ತನೆ ಮಾಡುವತ್ತ ಪಂಚಾಯತವು ಗುರಿ ಇಟ್ಟಿದೆ. ರಾಜಕೀಯ. ಆಡಳಿತಾತ್ಮಕ. ಆರ್ಥಿಕ. ಸಾಮಾಜಿಕ. ಸಾಂಸ್ಕೃತಿಕ ಮುಂತಾದವುಗಳ ಜ್ಞಾನವನ್ನು ವಿದ್ಯಾಸಂಸ್ಥೆಗಳು ಸರಿಯಾಗಿ ಒದಗಿಸಿಕೊಟ್ಟರೆ ಹಳ್ಳಿಗಾಡಿನ ಉದ್ಧಾರವಾಗುವದು. ಶಾಲೆಗಳಿಗೆ ಒಳ್ಳೆಯ ಕಟ್ಟಡ, ಉಪಕರಣಗಳು, ಆಟದ ಮೈದಾನ. ಒಳ್ಳೆಯ ಶಿಕ್ಷಕರು ಹಾಗೂ ವಿದ್ಯಾರ್ಥಿಗಳು ಲಭ್ಯವಾಗುವಂತೆ ಪಂಚಾಯತವು ಲಕ್ಷ್ಯವಹಿಸಬೇಕಾಗುವುದು. ಹಳ್ಳಿಗಾಡಿನ ಅನಾರೋಗ್ಯ. ಅಶಿಕ್ಷತೆ. ಮೂಢನಂಬಿಕೆ. ನಿರುದ್ಯೋಗತನ. ಅಮಿತ ಸಂತಾನ. ಮುಂತಾದ ಅನಿಷ್ಟತೆಗಳಿಗೆ ಶಿಕ್ಷಣವು ರಾಮಬಾಣವು.

ಹಳ್ಳಿಗಾಡಿನ ಸಾಂಸ್ಕೃತಿಕ ಅಭಿವೃದ್ಧಿಯತ್ತ ಪಂಚಾಯತದ ಗುರಿ ಇದೆ. ಹಳ್ಳಿಗಾಡಿನ ಆಟ. ದೊಡ್ಡಾಟ. ನಾಟಕ. ಯಕ್ಷ

ಗಾನ, ಜನಪದ ಸಾಹಿತ್ಯ, ರಾಟಿ, ಹೆಣಿಕೆ, ಕಸೂತಿ ಮುಂತಾದವುಗಳಿಗೆ ವೈಜ್ಞಾನಿಕವಾಗಿ ಆರ್ಥಿಕವಾಗಿ ನೆರವು ಹಾಗೂ ಮಾರ್ಗದರ್ಶನ ನೀಡುವುದು ಅತ್ಯವಶ್ಯ. ಜನಪದ ಸಾಂಸ್ಕೃತಿಕ ರಂಗವು ವೈವಿಧ್ಯಮಯವಾಗಿದೆ, ಅಪಾರವಾಗಿದೆ, ಅಷ್ಟೇ ಅಮೌಲ್ಯವಾಗಿದೆ. ಅವರಲ್ಲಿ ದೇಶದ ಧರ್ಮ, ಸಂಸ್ಕೃತಿ ಅಷ್ಟೇ ಏಕೆ ಜೀವವೇ ಅಡಗಿದೆ. ಅದಕ್ಕೆ ಸಚೇತನ ನೀಡುವುದು ಪಂಚಾಯತಕ್ಕೆ ಒಳ್ಳೆಯ ಉದ್ದೇಶ.

ಪಂಚಾಯತದ ಅತಿಮುಖ್ಯ ಉದ್ದೇಶವೆಂದರೆ ಹಳ್ಳಿಗಾಡಿನ ಸಮಾಜದಲ್ಲಿ ಸಹಕಾರ, ಸಹಬಂಧುತ್ವ ಹಾಗೂ ಒಗ್ಗಟ್ಟನ್ನು ತರುವುದಾಗಿದೆ. ಹಳ್ಳಿಗರ ಮನ ಪರಿವರ್ತನೆ ಮಾಡಿ, ಅವರನ್ನು ವಿದ್ಯಾವಂತರನ್ನಾಗಿ, ಸುಶಿಕ್ಷಿತರನ್ನಾಗಿ, ಸುಸಂಸ್ಕೃತರನ್ನಾಗಿ ಮಾಡಿ ಅವರನ್ನು ರಾಜಕೀಯ, ಸಾಮಾಜಿಕ, ಆರ್ಥಿಕ ಅಭಿವೃದ್ಧಿಯತ್ತ ತೊಡಗಿಸಬೇಕಾಗಿದೆ. ಹಳ್ಳಿಗಾಡಿನ ಸರ್ವತೋಮುಖ ಅಭಿವೃದ್ಧಿಯತ್ತ ಅವರನ್ನು ಸನ್ನದ್ಧಗೊಳಿಸಬೇಕಾಗಿದೆ.

## ೫. ಸಂಘಟನೆ

(ಬಳವಂತರಾಯ ವರದಿಯ ಪ್ರಕಾರ)[*]

ಬಳವಂತರಾಯ ಮೆಹತಾರವರ ವರದಿಯ ಪ್ರಕಾರ ಪಂಚಾಯತ ಆಡಳಿತದಲ್ಲಿ ಮುಖ್ಯವಾಗಿ ಮೂರು ಹಂತಗಳು ಅಡಕವಾಗಿವೆ– ಹಳ್ಳಿಯ ಪಂಚಾಯತ, ತಾಲೂಕು ಮಟ್ಟದ ಪಂಚಾಯತ ಹಾಗೂ ಜಿಲ್ಲಾ ಮಟ್ಟದ ಪಂಚಾಯತ. ರಾಷ್ಟ್ರದ

ಎಲ್ಲ ರಾಜ್ಯಗಳೂ ಸಾಮಾನ್ಯವಾಗಿ ಈ ಮೂರು ಹಂತದ ಆಡಳಿತವನ್ನು ಕೇಂದ್ರದ ಆದೇಶದ ಮೇರೆಗೆ ಒಪ್ಪಿಕೊಂಡು, ಜಾರಿಯಲ್ಲಿ ತಂದಿವೆ. ಈ ಹಂತಗಳ ಹೆಸರು, ಸಂಘಟನೆಯು ನಿಯಮಾವಳಿಗಳಲ್ಲಿ ಮಾತ್ರ–ದೇಶದುದ್ದಕ್ಕೂ ಏಕತೆ ಇರದೆ ಆಯಾ ರಾಜ್ಯಕ್ಕೆ ಅನುಕೂಲವಾಗುವಂತೆ ಆಯಾ ರಾಜ್ಯದ ಪಂಚಾಯತ ಕಾಯ್ದೆಯ ಮೇರೆಗೆ ವಿವಿಧತೆ ಇದೆ.

ಸಾಮಾನ್ಯವಾಗಿ ಹಳ್ಳಿಯ ಮಟ್ಟದ ಮೊದಲನೆಯ ಹಂತಕ್ಕೆ "ಪಂಚಾಯತ" ಅಥವಾ "ಹಳ್ಳಿಯ ಪಂಚಾಯತ" ಎಂದು ಹೆಸರು. ದೊಡ್ಡ ಹಳ್ಳಿಯ ಪಂಚಾಯತಕ್ಕೆ "ಶಹರ" ಅಥವಾ "ಪಟ್ಟಣ" ಪಂಚಾಯತ (Town Panchayat) ಎಂದು ಹೆಸರು. ಹಲವು ಚಿಕ್ಕ ಹಳ್ಳಿಗಳು ಕೂಡಿ ಒಂದು ಪಂಚಾಯತವಾಗಿದ್ದರೆ ಅದು ಮಂಡಳ (Group) ಪಂಚಾಯತವು. ಇವೆಲ್ಲವೂ ಪಂಚಾಯತ ಆಡಳಿತದ ಮೊದಲನೆಯ ಹಂತದಲ್ಲಿ ಬರುವವು. ಹಳ್ಳಿಯ ಪಂಚಾಯತವು ಪ್ರಾಚೀನ ಕಾಲದಿಂದ ಇಲ್ಲಿಯ ವರೆಗೆ ಭಾರತದ ಇತಿಹಾಸದುದ್ದಕ್ಕೂ ಒಂದಿಲ್ಲೊಂದು ವಿಧಾನದಲ್ಲಿ ಅವ್ಯಾಹತವಾಗಿ ಬಂದಿದೆ.

ಈ ಮೊದಲನೆಯ ಹಂತದ ಪಂಚಾಯತದ ಗಾತ್ರವು ಅದರ ಹೆಸರೇ ಸೂಚಿಸುವಂತೆ ಕನಿಷ್ಠ ಐವರು ಪಂಚರನ್ನು ಹೊಂದಿರಬೇಕು. ಆಯಾರಾಜ್ಯಗಳಲ್ಲಿ ಇದರ ಗಾತ್ರವು ಹಳ್ಳಿಗಳ ಜನಸಂಖ್ಯೆಯ ಮೇರೆಗೆ ಬೇರೆ ಬೇರೆಯಾಗಿದೆ. ಪಂಜಾಬದಲ್ಲಿ ಇದರ ಗಾತ್ರವು ೫ ರಿಂದ ೯; ರಾಜಸ್ಥಾನ, ಮದ್ರಾಸದಲ್ಲಿ

೫ ರಿಂದ ೧೫; ಉತ್ತರ ಪ್ರದೇಶದಲ್ಲಿ ೧೬ ರಿಂದ ೩೧. ಕರ್ನಾಟಕದಲ್ಲಿ ೧೧ ರಿಂದ ೧೯. ಆಯ್ಕೆಯ ವಿಷಯದಲ್ಲಿಯೂ ರಾಜ್ಯಗಳಲ್ಲಿ ವಿವಿಧತೆ ಇದೆ. ಬಳವಂತರಾಯ ಮೆಹತಾ ಸಮಿತಿಯ ಪ್ರಕಾರ ಪಂಚರು ನೇರವಾಗಿ ಪ್ರೌಢಮತದಾನ ಪದ್ಧತಿಯ ಪ್ರಕಾರ ಪಂಚಾಯತ ಕ್ಷೇತ್ರದಲ್ಲಿಯ ವಾರ್ಡುಗಳಿಂದ ಆಯ್ಕೆಯಾಗಬೇಕಲ್ಲದೆ ಇಬ್ಬರು ಹೆಣ್ಣುಮಕ್ಕಳು ಮತ್ತು ಒಬ್ಬ ಪರಿಶಿಷ್ಟ ಜಾತಿಯವನು ಮತ್ತು ಒಬ್ಬ ಪರಿಶಿಷ್ಟ ಜನಾಂಗದವನು ಆಯ್ಕೆಯಾಗಬೇಕು[೧೯] (Co-option). ಬಿಹಾರ ರಾಜ್ಯದಲ್ಲಿ ಮುಖಿಯಾ (ಸರಪಂಚ)ನು ಸ್ತ್ರೀಯರ ಮತ್ತು ಅಲ್ಪಸಂಖ್ಯಾತರ ಪ್ರತಿನಿಧಿಗಳನ್ನು ನಾಮಕರಣ ಮಾಡುವನು. ಕೆಲವು ರಾಜ್ಯಗಳಲ್ಲಿ ಸ್ತ್ರೀಯರಿಗೆ ಎರಡು ಸ್ಥಾನಗಳನ್ನು ಹಾಗೂ ಪರಿಶಿಷ್ಟ ಜಾತಿ ಮತ್ತು ಜನಾಂಗದವರಿಗೆ ಒಂದೊಂದು ಸ್ಥಾನವನ್ನು ಕಾಯ್ದಿಡಲಾಗುವುದು. ಈ ವಿಧಾನವು ಕರ್ನಾಟಕದಲ್ಲಿತ್ತು (೧೯೫೯–೮೫).

ಹಳ್ಳಿಯ ಪಂಚಾಯತದ ಮುಖ್ಯಸ್ಥ–ಸರಪಂಚ (ಕರ್ನಾಟಕದಲ್ಲಿ–ಚೇರ್ಮನ್; ಬಿಹಾರದಲ್ಲಿ–ಮುಖಿಯಾ; ಉ.ಪ್ರ.ದಲ್ಲಿ ಪ್ರಧಾನನನ್ನು ಸಾಮಾನ್ಯವಾಗಿ ಆಯ್ಕೆಯಾದ ಪಂಚರು ತಮ್ಮಲ್ಲಿ ಒಬ್ಬರನ್ನು ಆಯ್ಕೆಮಾಡುವರು. ಸುಮಾರು ೫ ರಾಜ್ಯಗಳಲ್ಲಿ ಸರಪಂಚನನ್ನು ನೇರವಾಗಿ ಆಯಾ ಹಳ್ಳಿಯ ಪ್ರೌಢಜನತೆ ಆಯ್ಕೆ ಮಾಡುವರು. ಹಳ್ಳಿಯ ಪಂಚಾಯತದ

---

೧೯ ರಾಜಸ್ಥಾನ ಪಂಚಾಯತ ಕಾಯ್ದೆ (೧೯೫೩)ಯಲ್ಲಿ ಈ ವಿಧಾನವಿದೆ.

ಸದಸ್ಯರು ಸಾಮಾನ್ಯವಾಗಿ ಮೂರು ವರ್ಷದ ಅವಧಿಗೆ ಆಯ್ಕೆಯಾಗುವರು (ಮಹಾರಾಷ್ಟ್ರ, ಪಶ್ಚಿಮ ಬಂಗಾಲ, ಜಮ್ಮು-ಕಾಶ್ಮೀರಗಳಲ್ಲಿ ಈ ಅಧಿಕಾರಾವಧಿಯು ೪ ವರ್ಷ: ಆಂಧ್ರ ಪ್ರದೇಶ, ಉ.ಪ್ರ., ಮ. ಪ್ರ., ಮದ್ರಾಸ-೫ ವರ್ಷ). ಕರ್ನಾಟಕದಲ್ಲಿ ಮೊದಲು ನಾಲ್ಕು ವರ್ಷವಿತ್ತು, ೧೯೭೭ರಲ್ಲಿ ಇದು ೫ ವರ್ಷಕ್ಕೇರಿತು. ಆಡಳಿತೆಯ ಅನುಕೂಲಕ್ಕಾಗಿ ಪಂಚಾಯತವು ತನ್ನ ಕೆಳಗೆ ಕೆಲವು ಸಮಿತಿಗಳನ್ನು ರಚಿಸಬಹುದು. ಉದಾ. ಶಾಲಾ ಸುಧಾರಣಾ ಸಮಿತಿ, ಆರೋಗ್ಯ ಸಮಿತಿ, ಕೃಷಿ ಸಮಿತಿ. ಮುಂ. ಅವಕ್ಕೆ ಸರಪಂಚ ಅಥವಾ ಪಂಚನು ಚೇರ್ಮನ್ನನಾಗಿ ಕೆಲಸಮಾಡುವನು.

ಹಳ್ಳಿಯ ಪಂಚಾಯತದ ಆಡಳಿತಕ್ಕೆ ಅನುಕೂಲವಾಗುವಂತೆ ಒಂದು ಪಂಚಾಯತಕ್ಕೆ ಒಬ್ಬ ಕಾರ್ಯದರ್ಶಿ ಮತ್ತು ಒಬ್ಬ ಸಿಪಾಯಿಯ ಸಿಬ್ಬಂದಿಯಿರುವುದು. ಈ ಸಿಬ್ಬಂದಿಯನ್ನು ಸಾಮಾನ್ಯವಾಗಿ ಸರಪಂಚರು ನಿಯಮಿಸುವರು. ಕೆಲರಾಜ್ಯಗಳಲ್ಲಿ ತರಬೇತಿ ಪಡೆದ ಸಿಬ್ಬಂದಿಯನ್ನು ಸರಕಾರವೇ ನಿಯಮಿಸುವುದು.

ಹಳ್ಳಿಯ ಪಂಚಾಯತದ ಮೂಲ ಆದಾಯವು-ಮನೆಪಟ್ಟಿ, ಸರಕಾರದ ಸಹಾಯಧನ, ದಂಡದ ಹಣ ಮುಂತಾದವನ್ನು ಅವಲಂಬಿಸಿರುವುದು. ಈ ಆದಾಯದ ಮೇಲೆ ಸಾಮಾನ್ಯವಾಗಿ ಪಂಚಾಯತದ ಕಾರ್ಯಚಟುವಟಿಕೆಗಳು ಅವಲಂಬಿಸಿರುವವು. ಪಂಚಾಯತ ಆಡಳಿತದ ಉದ್ದೇಶವು-ಹಳ್ಳಿಗಳ ಸರ್ವಾಂಗೀಣ

ಉನ್ನತಿ, ಪ್ರಗತಿ ಹಾಗೂ ಅಭಿವೃದ್ಧಿಯಾಗಿದೆ. ಆ ದಿಶೆಯತ್ತ, ಹಳ್ಳಿ ಪಂಚಾಯತಕ್ಕೆ ಸ್ವಾತಂತ್ರ್ಯ, ಆರ್ಥಿಕ ನೆರವು, ಜನತೆಯ ಸಹಕಾರ, ಮೇಲಾಧಿಕಾರಿಗಳ ನಿಷ್ಕಾಮ ಮಾರ್ಗದರ್ಶನ ಅತ್ಯವಶ್ಯ.

ಬಳವಂತರಾಯ ಮೆಹ್ತಾ ವರದಿಯ ಪ್ರಕಾರ ಒಂದು ವಿಭಾಗ (Block) ಮಟ್ಟದಲ್ಲಿ ಒಂದು ಪಂಚಾಯತ ಸಮಿತಿಯು ಇರುವುದು. ರಾಜ್ಯಗಳು ಇವಕ್ಕೆ ತಮ್ಮದೇ ಆದ ಹೆಸರನ್ನಿತ್ತಿರುವವು—ಉದಾ. ಗುಜರಾತದಲ್ಲಿ ಇವಕ್ಕೆ ತಾಲೂಕ ಪಂಚಾಯತ ಎನ್ನುವರು; ಕರ್ನಾಟಕದಲ್ಲಿ ಇವಕ್ಕೆ ತಾಲೂಕಾ ಅಭಿವೃದ್ಧಿ ಮಂಡಳ ಎಂದು ಹೆಸರಿತ್ತು. ಕರ್ನಾಟಕದಲ್ಲಿ ಸಾಮಾನ್ಯವಾಗಿ ಪ್ರತಿ ತಾಲೂಕಿಗೆ ಒಂದರಂತೆ ತಾಲೂಕಾ ಅಭಿವೃದ್ಧಿ ಮಂಡಳಗಳಿದ್ದವು. ೧೭೫ ತಾಲೂಕುಗಳಿಗೆ ೧೭೫ ತಾಲೂಕಾ ಅಭಿವೃದ್ಧಿ ಮಂಡಳಗಳಿದ್ದವು[೧೫]. ಕರ್ನಾಟಕದಲ್ಲಿ ಇವು ಪ್ರಾಮುಖ್ಯತೆಯನ್ನು ಪಡೆದಿದ್ದವು. ಇವುಗಳ ಗಾತ್ರ ಅಂದರೆ ಮಂಡಳಿಯ ಸದಸ್ಯತ್ವವು ೧೫ ರಿಂದ ೧೯ರ ವರೆಗೆ ಇದ್ದಿತು. ಒಂದು ಲಕ್ಷಕ್ಕಿಂತ ಕಡಿಮೆ ಜನಸಂಖ್ಯೆ ಇದ್ದ ತಾಲೂಕಿಗೆ ೧೫ ಸದಸ್ಯರು ಹಾಗೂ ಒಂದು ಲಕ್ಷಕ್ಕಿಂತ ಹೆಚ್ಚು ಜನಸಂಖ್ಯೆಯುಳ್ಳ ತಾಲೂಕಿಗೆ ೧೯ ಸದಸ್ಯರುಗಳಿದ್ದರು.[೧೬] ಸದಸ್ಯರು ಆಯಾ ತಾಲೂಕಿನ

೧೫. ಬಿ.ಎ ವಿ. ಶರ್ಮಾ. "Karnatak", Patterns of Panchayat Raj in India, ಸಂ., ಜಿ. ರಾಮರೆಡ್ಡಿ.

೧೬. ಪಿ.ಆರ್. ದುಭಾಷಿ, —Rural Development Administration in India, ಪೊಪ್ಯುಲರ ಪ್ರಕಾಶನ, ಮುಂಬಯಿ, ೧೯೭೦.

ಮತದಾರರಿಂದ ನೇರವಾಗಿ ಆಯ್ಕೆಯಾಗುತ್ತಿದ್ದರು. ಸದಸ್ಯರು ತಮ್ಮಲ್ಲಿಯೇ ಒಬ್ಬರನ್ನು ಅಧ್ಯಕ್ಷರನ್ನಾಗಿ ಆಯ್ಕೆ ಮಾಡುತ್ತಿದ್ದರು. ಸದಸ್ಯರಲ್ಲಿ ಕನಿಷ್ಟ ಒಬ್ಬರು ಪರಿಶಿಷ್ಟಜಾತಿಯವರು ಹಾಗೂ ಇಬ್ಬರು ಮಹಿಳೆಯರು ಇರುತ್ತಿದ್ದರು. ಪಂಚಾಯತಗಳಿಗೆ ಹಾಗೂ ತಾಲೂಕಾ ಅಭಿವೃದ್ಧಿ ಮಂಡಳಿಗಳಿಗೆ ೧೯೬೦ ಮತ್ತು ೧೯೬೮ರಲ್ಲಿ ಸಾರ್ವತ್ರಿಕ ಚುನಾವಣೆಗಳಾಗಿದ್ದವು. ಸಾಮಾನ್ಯವಾಗಿ ತಾ. ಅ. ಮಂಡಳಿಗಳು ಎರಡು ತಿಂಗಳಿಗೊಮ್ಮೆ ಸಭೆ ಕೂಡುತ್ತಿದ್ದವು. ಒಟ್ಟು ಸದಸ್ಯರ ¼ದಷ್ಟು ಸದಸ್ಯರು ಇಚ್ಛಿಸಿದರೆ ವಿಶೇಷವಾದ ಸಭೆಗಳೂ ಕೂಡುತ್ತಿದ್ದವು. ಸಭೆ ನಡೆಯಲು ಕನಿಷ್ಟ ⅓ದಷ್ಟು ಸದಸ್ಯರ ಹಾಜರಿ ಅವಶ್ಯವಿತ್ತು. ಈ ಮಂಡಳಿಗಳಿಗೆ ತಮ್ಮವೇ ಆದ ಸ್ಥಿರ ಕಮಿಟಿ, ಲೆಕ್ಕಪತ್ರ ಕಮಿಟಿ ಮತ್ತು ಸಾರ್ವಜನಿಕ ಆರೋಗ್ಯ ಕಮಿಟಿಗಳಿದ್ದವು. ಪ್ರತಿಯೊಂದು ಕಮಿಟಿಯಲ್ಲಿ ೩ ರಿಂದ ೫ರ ವರೆಗೆ ಸದಸ್ಯರಿದ್ದರು. ಮೊದಲಿನ ಎರಡಕ್ಕೆ ಅಧ್ಯಕ್ಷನೂ ಇನ್ನುಳಿದುದಕ್ಕೆ ಉಪಾಧ್ಯಕ್ಷನೂ ಚೇರ್ಮನ್ನರಾಗಿದ್ದರು. ಐದನೆಯ ಪಂಚವಾರ್ಷಿಕ ಯೋಜನೆಗನುಗುಣವಾಗಿ ತಾ.ಅ. ಮಂಡಳಿಗಳ ಯೋಜನೆಗಳು ಈ ಮುಂದಿನವುಗಳಿಗೆ ಸಂಬಂಧಿಸಿದ್ದವು— (೧) ಒಕ್ಕಲುತನ. (೨) ಪಶುಸಂಗೋಪನ. (೩) ಅರಣ್ಯ. (೪) ಚಿಕ್ಕ ನೀರಾವರಿ. (೫) ಉದ್ಯಮಗಳು. (೬) ರೇಷ್ಮೆ ವ್ಯವಸಾಯ. (೭) ಪರಿಶಿಷ್ಟ ಜಾತಿ ಮತ್ತು ಜನಾಂಗಗಳ ಕಲ್ಯಾಣ ಮತ್ತು (೮) ಆಯುರ್ವೇದಿ ಔಷಧಾಲಯಗಳು.

ಬಲವಂತರಾಯ ಮೆಹ್ತಾ ವರದಿಯ ಪ್ರಕಾರ ತಾಲೂಕಿನ ಎಲ್ಲ ಅಭಿವೃದ್ಧಿ ಕಾರ್ಯಗಳನ್ನು ತಾ.ಅ. ಮಂಡಳಿಗಳಿಗೆ ಒಪ್ಪಿಸುವುದು ಮುಖ್ಯ ಉದ್ದೇಶವಾಗಿತ್ತು. ಈ ಮಂಡಳಿಗಳಿಗೆ ನೀಗಲಾರದವನ್ನು ಮಾತ್ರ ರಾಜ್ಯಸರಕಾರಗಳು ಮಧ್ಯಪ್ರವೇಶಿಸಿ ಕಾರ್ಯ ಕೈಕೊಳ್ಳಬಹುದಿತ್ತು. ಕಲೆ, ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಸಹ ಈ ಮಂಡಳಿಗಳಿಗೆ ಒಪ್ಪಿಸುವ ಉದ್ದೇಶ ಮೆಹ್ತಾ ವರದಿಯದಾಗಿತ್ತು. ಕೇವಲ ಪೋಲಿಸು, ಸುವ್ಯವಸ್ಥೆ, ನ್ಯಾಯಿಕ ಕಾರ್ಯಗಳಲ್ಲಿ ಮಾತ್ರ ರಾಜ್ಯ ಸರಕಾರ ತಾಲೂಕಿನಲ್ಲಿ ಪ್ರವೇಶಿಸಬಹುದಿತ್ತು. ವಿಭಾಗೀಯ ಅಭಿವೃದ್ಧಿ ಅಧಿಕಾರಿಯು (B.D.O.) ಈ ಮಂಡಳಿಗಳ ಕಾರ್ಯನಿರ್ವಾಹಕನಾಯ ಮುಖ್ಯ ಅಧಿಕಾರಿಯಾಗಿದ್ದನು. ಒಟ್ಟಿನಲ್ಲಿ ಈ ಮಂಡಳಿಗಳು ತಾಲೂಕು ಮಟ್ಟದ ಸ್ವತಂತ್ರ ಸಣ್ಣ ಸರಕಾರಗಳಾಗಿದ್ದವು.

ಕರ್ನಾಟಕದಲ್ಲಿಯಂತೆ ಓರಿಸ್ಸಾ ಮತ್ತು ಮಧ್ಯಪ್ರದೇಶ ರಾಜ್ಯಗಳಲ್ಲಿ ತಾಲೂಕುಮಟ್ಟದ ಪಂಚಾಯತ ಸಮಿತಿಗೆ ಸದಸ್ಯರುಗಳು ನೇರವಾಗಿ ಆಯಾ ತಾಲೂಕಿನ ಮತದಾರರಿಂದ ಆಯ್ಕೆಯಾಗುವರು. ರಾಜಸ್ಥಾನ ಮತ್ತು ಆಂಧ್ರಪ್ರದೇಶ ರಾಜ್ಯಗಳಲ್ಲಿ ಆಯಾ ತಾಲೂಕಿನಲ್ಲಿದ್ದ ಪಂಚಾಯತಗಳ ಸರಪಂಚರು ತಮ್ಮ ತಾಲೂಕ ಮಟ್ಟದ ಪಂಚಾಯತ ಸಮಿತಿಗೆ ಸ್ವಾಭಾವಿಕವಾಗಿ ಸದಸ್ಯರಾಗುವರು. ಅಸ್ಸಾಮ ರಾಜ್ಯದಲ್ಲಿ ಪ್ರತಿ ಗ್ರಾಮಸಭೆಯು ತನ್ನ ತಾಲೂಕಾ ಮಟ್ಟದ ಪಂಚಾಯತ ಸಮಿತಿಗೆ ಒಬ್ಬರು ಅಥವಾ ಇಬ್ಬರನ್ನು ಆಯ್ಕೆಮಾಡುತ್ತದೆ. ತಮಿಳು

ನಾಡು ರಾಜ್ಯದಲ್ಲಿ ಪ್ರತಿ ಪಂಚಾಯತವು ತಾಲೂಕು ಮಟ್ಟದ ಪಂಚಾಯತಿ ಸಮಿತಿಗೆ ಒಬ್ಬ ಪ್ರತಿನಿಧಿಯನ್ನು ಆಯ್ಕೆಮಾಡುವುದು. ಪಂಜಾಬ ರಾಜ್ಯದಲ್ಲಿ ಪಂಚ ಹಾಗೂ ಸರಪಂಚರು ತಮ್ಮಲ್ಲಿ ನಿಗದಿ ಪಡಿಸಿದ ಸದಸ್ಯರನ್ನು ಆಯ್ಕೆಮಾಡಿ ಕಳಿಸುವರು. ಸಾಮಾನ್ಯವಾಗಿ ಎಲ್ಲ ರಾಜ್ಯಗಳಲ್ಲಿ ಪರಿಶಿಷ್ಟ ಜಾತಿ, ಜನಾಂಗ ಹಾಗೂ ಮಹಿಳೆಯರಿಗೆ ಕೆಲ ಸ್ಥಾನಗಳನ್ನು ಕಾದಿಡಲಾಗುವುದು.

ಬಲವಂತರಾಯ ಮೆಹ್ತಾ ವರದಿಯ ಪ್ರಕಾರ ಮೂರನೆಯ ಹಾಗೂ ಕೊನೆಯ ಮೇಲ್ಮಟ್ಟದ ಪಂಚಾಯತ ಆಡಳಿತದ ಹಂತವೆಂದರೆ ಜಿಲ್ಲಾ ಪರಿಷತ್. ಆಯಾ ರಾಜ್ಯಗಳು ಈ ಹಂತಕ್ಕೂ ತಮ್ಮದೇ ಆದ ಹೆಸರು, ರೂಪರೇಷೆಗಳನ್ನು ತಮ್ಮ ಕಾನೂನುಗಳಲ್ಲಿ ಅಳವಡಿಸಿಕೊಂಡಿವೆ. ಕರ್ನಾಟಕದಲ್ಲಿ ಇದು ಜಿಲ್ಲಾ ಅಭಿವೃದ್ಧಿ ಮಂಡಳವಾಗಿತ್ತು (District Development Council) ಪ್ರತಿಯೊಂದು ಜಿಲ್ಲೆಗೆ ಇಂಥ ಒಂದು ಮಂಡಳಿ ಇತ್ತು. ಇದರಲ್ಲಿ ಆಯಾ ಜಿಲ್ಲೆಯ ಕಲೆಕ್ಟರ, ಆಯಾ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಸಂಸತ್ತಿನ ಸದಸ್ಯರು, ರಾಜ್ಯದ ಶಾಸನಾಂಗದ ಸದಸ್ಯರು ಹಾಗೂ ತಾಲೂಕಾ ಅಭಿವೃದ್ಧಿ ಮಂಡಳದ ಅಧ್ಯಕ್ಷರುಗಳು ಸದಸ್ಯರುಗಳಾಗಿದ್ದರು. ಜಿಲ್ಲೆಯ ಸುಮಾರು ೧೫ ಅಧಿಕಾರಿಗಳು ಸಹ ಇದರಲ್ಲಿ ಭಾಗವಹಿಸಬಹುದಿತ್ತು. ಒಬ್ಬ ಪರಿಶಿಷ್ಟ ಜಾತಿಯವರನ್ನು ಹಾಗೂ ಒಬ್ಬ ಮಹಿಳೆಯನ್ನು ನಾಮಕರಣ ಮಾಡಲು ಅವಕಾಶವಿತ್ತು. ಕಲೆಕ್ಟರನು ಈ ಮಂಡಳಿಯ

ಅಧ್ಯಕ್ಷನಾಗಿದ್ದನು. ಇದಕ್ಕೆ ಬಿಟ್ಟ ಕಾರ್ಯದರ್ಶಿಯು ಸರಕಾರ ದಿಂದ ನೇಮಕವಾಗಬಹುದಿತ್ತು. ಜಿಲ್ಲಾ ಅಭಿವೃದ್ಧಿ ಮಂಡ ಳಿಯ ಕಾರ್ಯವು ಮುಖ್ಯವಾಗಿ ತಾಲೂಕಾ ಅಭಿವೃದ್ಧಿ ಮಂಡಳಿ ಗಳ ಮೇಲ್ವಿಚಾರಣೆ, ಮಾರ್ಗದರ್ಶನ, ಹೊಂದಾಣಿಕೆ, ಹಾಗೂ ಹಣ ವಿತರಣೆಯಾಗಿತ್ತು.

ಗುಜರಾಥ್, ಉತ್ತರ ಪ್ರದೇಶ ಮತ್ತು ಮಹಾರಾಷ್ಟ್ರ ರಾಜ್ಯಗಳಲ್ಲಿ ಜಿಲ್ಲಾ ಪರಿಷತ್ತಿಗೆ ಆಯಾ ಭಾಗದಲ್ಲಿಯ ಮತ ದಾರರಿಂದ ಸದಸ್ಯರುಗಳು ನೇರವಾಗಿ ಆಯ್ಕೆಯಾಗುವರು. ಮಹಾರಾಷ್ಟ್ರ ಕಾಯ್ದೆ (೧೯೬೧)ಯ ಪ್ರಕಾರ ಪರಿಷತ್ತಿನ ಸದಸ್ಯರ ಸಂಖ್ಯೆಯು ೪೦ ರಿಂದ ೬೦ರ ವರೆಗಿರುವದು. ಎಲ್ಲ ರಾಜ್ಯಗಳಲ್ಲಿ (ತಮಿಳುನಾಡು ಒಂದನ್ನು ಬಿಟ್ಟು) ಹೆಣ್ಣು ಮಕ್ಕಳಿಗೆ ಈ ಪರಿಷತ್ತಿನಲ್ಲಿ ಪ್ರಾತಿನಿಧ್ಯ ಒದಗಿಸಲಾಗಿದೆ. ಅದೇ ರೀತಿ ಮಹಾರಾಷ್ಟ್ರ ಮತ್ತು ತಮಿಳುನಾಡು ಹೊರತು ಪಡಿಸಿ ಉಳಿದೆಲ್ಲ ರಾಜ್ಯಗಳಲ್ಲಿ ಪರಿಶಿಷ್ಟ ಜಾತಿ ಹಾಗೂ ಜನಾಂಗ ದವರಿಗೂ ಪ್ರತ್ಯೇಕ ಪ್ರಾತಿನಿಧ್ಯವನ್ನು ಒದಗಿಸಲಾಗಿದೆ.

ಪ್ರತಿಯೊಂದು ರಾಜ್ಯದಲ್ಲಿಯೂ ಆಯಾ ಜಿಲ್ಲಾ ಪರಿ ಷತ್ತಿಗೆ ತನ್ನದೇ ಆದ ಕೆಲ ಕಮಿಟಿಗಳು ಇರುವವು. ಪರಿಷತ್ತಿನ ಕಾರ್ಯಾವಧಿಯು, ಮೆಹ್ತಾ ವರದಿಯ ಪ್ರಕಾರ ೫ ವರ್ಷ, ಆದರೆ ರಾಜಸ್ಥಾನ, ಆಂಧ್ರ ಪ್ರದೇಶಗಳಲ್ಲಿ ಇದು ಮೂರು ವರ್ಷ.

ಬಲವಂತರಾಯ ಮೆಹ್ತಾ ವರದಿಯ ಪ್ರಕಾರ ಜಿಲ್ಲಾ ಪರಿಷತ್ತಿನ ಉದ್ದೇಶವು ತಾಲೂಕು ಮಟ್ಟದ ಪಂಚಾಯತ

ಸಮಿತಿಗಳಿಗೆ ಮಾರ್ಗದರ್ಶನ ಮಾಡುವುದು, ಉತ್ತೇಜನ ಕೊಡುವುದು, ಸಹಕಾರ ನೀಡುವುದು, ಹೊಂದಾಣಿಕೆ ತರುವುದು ಹಾಗೂ ಹಣ ವಿತರಣೆ ಮಾಡುವುದಾಗಿದೆ. ತಾಲೂಕು ಮಟ್ಟದ ಆಡಳಿತಕ್ಕೆ ಶಿಕ್ಷಣ ಹಾಗೂ ತರಬೇತಿ ನೀಡುವುದು. ಮನೆಯ ಮುಖ್ಯಸ್ಥನು ಮನೆತನವನ್ನು ನಡೆಸುವಂತೆ ಜಿಲ್ಲಾ ಪರಿಷತ್ತು ಇಡೀ ಜಿಲ್ಲೆಯ ಪಂಚಾಯತ ಆಡಳಿತವನ್ನು ನಡೆಸುವ ಹೊಣೆ ಹೊತ್ತಿದೆ. ಕೆಲ ರಾಜ್ಯಗಳಲ್ಲಿ ಇದಕ್ಕೆ ಹೆಚ್ಚು ಮಹತ್ವ ನೀಡಲಾಗಿದೆ. ಉದಾಹರಣೆಗೆ ಮಹಾರಾಷ್ಟ್ರದಲ್ಲಿ ಇದು ಹೆಚ್ಚು ಪ್ರಬಲವಾಗಿದೆ. ಕರ್ನಾಟಕದಲ್ಲಿ ಜಿಲ್ಲಾ ಅಭಿವೃದ್ಧಿ ಮಂಡಳಿಯು ಅಷ್ಟೊಂದು ಪ್ರಬಲವಾಗಿರಲಿಲ್ಲ. ಅದು ಕೇವಲ ಮನೆಯ ಮುಖ್ಯಸ್ಥನಂತಿತ್ತು. ರಾಜಸ್ಥಾನದಲ್ಲಿಯೂ ಇದು ಅಬಲವಾಗಿದೆ. ಇನ್ನು ಮುಂದಿನ ಧೋರಣೆಯು ಜಿಲ್ಲಾ ಪರಿಷತ್ತನ್ನು ಸಬಲಗೊಳಿಸುವ ಕ್ರಮವನ್ನು ಕೈಕೊಳ್ಳುವದಾಗಿತ್ತು. ಉದಾಹರಣೆಗೆ ಕರ್ನಾಟಕದಲ್ಲಿಯ ಮಂಡಳ ಪಂಚಾಯತ ಮತ್ತು ಜಿಲ್ಲಾ ಪರಿಷತ್ತಿನ ಹೊಸ ಕಾಯ್ದೆ (೧೯೮೫). ಅವರೆ ಮೆಹ್ತಾ ಸಮಿತಿಯ ಸದಸ್ಯರುಗಳಲ್ಲಿ ಒಬ್ಬರಾದ ಶ್ರೀ ಬಿ. ಜಿ. ರಾವರು ಜಿಲ್ಲಾ ಪರಿಷತ್ತನ್ನು ಸಬಲಗೊಳಿಸುವ ಧೋರಣೆಗೆ ವಿರುದ್ಧವಾಗಿದ್ದರು.

**೬. ಮಂಡಲ ಪಂಚಾಯತ ಮತ್ತು ಜಿಲ್ಲಾ ಪರಿಷತ್ತು**

ಪಂಚಾಯತ ಆಡಳಿತದ ಉದ್ದೇಶ ಗ್ರಾಮದೇಳ್ಗೆಯಾಗಿದೆ ಗ್ರಾಮರಾಜ್ಯದಿಂದ ರಾಮರಾಜ್ಯವನ್ನು ಕಟ್ಟುವುದು ಮಹಾತ್ಮ

ಗಾಂಧೀಜಿಯವರ ಕನಸಾಗಿತ್ತು. ಗ್ರಾಮಗಳಿಂದ ವಿಧಾನಸಭೆ ಅಲ್ಲಿಂದ ಮುಂದೆ ಲೋಕಸಭೆಗೆ ಆಡಳಿತ ನಡೆದು ಏರಿದರೆ ಆಡಳಿತದ ಅಡಿಪಾಯವು ಭದ್ರವೂ ದೇಶವ್ಯಾಪಕವೂ ಆಗಿ ಅದರ ಮೇಲೆ ಗೋಪುರ ಹಾಗೂ ಕಳಸಗಳು ಚೆನ್ನಾಗಿ ಕಂಗೊಳಿಸುವವು. ಅಧಿಕಾರವು ದೇಶದ ರಾಜಧಾನಿ ದಿಲ್ಲಿಯಲ್ಲಿ ಕೇಂದ್ರೀಕೃತವಾಗಿದೆ. ರಾಜ್ಯಗಳ ರಾಜ್ಯಧಾನಿಗಳಲ್ಲಿ ಮನೆ ಗಟ್ಟಿದೆ. ದೇಶದ ಪ್ರತಿ ಹಳ್ಳಿಹಳ್ಳಿಗೂ ವಾಹಿನಿಯಾಗಿ ಹರಿದು ಬರಬೇಕಾಗಿದೆ. ಜನತೆ ಸರಕಾರದ ಕಡೆಗೆ ಹೋಗುವುದಲ್ಲ, ಸರಕಾರವೇ ಜನತೆಯತ್ತ ಬರಬೇಕಾಗಿದೆ. ಹಳ್ಳಿಗಾಡಿನ ಅಭಿವೃದ್ಧಿ ಹಳ್ಳಿಗನಿಂದಲೇ ಸಾಧ್ಯ. ಅಂಥ ಸಾಮರ್ಥ್ಯವನ್ನು ಹಳ್ಳಿಗರು ಬೆಳೆಸಿಕೊಳ್ಳಬೇಕಾಗಿದೆ. ಆ ದಿಶೆಯತ್ತ ಪಂಚಾಯತ ರಾಜ್ಯ ಗುರಿ ಇಟ್ಟಿದೆ.

ಕೇಂದ್ರ ಸರಕಾರವು ನೇಮಿಸಿದ ಬಲವಂತರಾಯ ಮೆಹ್ತಾ ಸಮಿತಿ (೧೯೫೭) ಯು ಮೂರು ಹಂತದ (ಗ್ರಾಮ ಪಂಚಾಯತ, ತಾಲೂಕ ಪಂಚಾಯತ ಮತ್ತು ಜಿಲ್ಲಾ ಪಂಚಾಯತ) ಪಂಚಾಯತ ರಾಜ್ಯವನ್ನು ಸೂಚಿಸಿತು. ಅದನ್ನು ಅನುಮೋದಿಸಿ ರಾಷ್ಟ್ರೀಯ ಅಭಿವೃದ್ಧಿ ಮಂಡಳಿಯು ರಾಜ್ಯಗಳಿಗೆ ಚಾಲನೆ ನೀಡಿತು (೧೯೫೮). ರಾಜಸ್ಥಾನದ ನಾಗೌರದಲ್ಲಿ ೧೯೫೯ ಅಕ್ಟೋಬರ ೨ ರಂದು, ಅಂದರೆ ಮಹಾತ್ಮಾ ಗಾಂಧೀಜಿಯವರ ಜನ್ಮದಿನದಂದು ಪ್ರಧಾನ ಮಂತ್ರಿ ಪಂಡಿತ ಜವಾಹರಲಾಲ ನೆಹರೂರವರು ಜ್ಯೋತಿ ಬೆಳಗಿಸಿ ಪಂಚಾಯತ ರಾಜ್ಯವನ್ನು ದೇಶದಲ್ಲಿ ಜಾರಿಯಲ್ಲಿ ತಂದರು.

ಕರ್ನಾಟಕವು (ಆಗ್ಗೆ ಮೈಸೂರು) ತನ್ನ ರಾಜ್ಯೋತ್ಸವ ದಿನದಂದು ಅಂದರೆ ನವೆಂಬರ ೧,೧೯೫೯ ರಂದು ಪಂಚಾಯತ ರಾಜ್ಯವನ್ನು ಜಾರಿಯಲ್ಲಿ ತಂದಿತು.[೧೭] ರಾಷ್ಟ್ರಾಧ್ಯಕ್ಷರಾದ ಡಾ. ರಾಜೇಂದ್ರ ಪ್ರಸಾದರು ಡಿಶಂಬರ ೧೯೬೦ರಲ್ಲಿ ಕರ್ನಾಟಕ ದಲ್ಲಿ ಪಂಚಾಯತ ರಾಜ್ಯವನ್ನು ಉದ್ಘಾಟಿಸಿದರು. ಪಂಚಾ ಯತಗಳು ಹಾಗೂ ತಾಲೂಕಾ ಅಭಿವೃದ್ಧಿ ಮಂಡಳಗಳಿಗೆ ಪ್ರಥಮ ಚುನಾವಣೆಯು ೧೯೬೦ ರಲ್ಲಾಯಿತು.[೧೮]

ಪಂಚಾಯತ ಆಡಳಿತದ ಅಭ್ಯಾಸಮಾಡಿ ವರದಿಯನ್ನು ಒಪ್ಪಿಸಲು ಕೇಂದ್ರ ಸರಕಾರ (ಜನತಾ) ವು ಹದಿನೆಂಟು ಸದಸ್ಯರುಳ್ಳ ಅಶೋಕ ಮೆಹ್ತಾ ಮಂಡಳಿಯನ್ನು ನಿಯಮಿಸಿತು. ಈ ಮಂಡಳಿಯು ೨೧-೮-೧೯೭೮ ರಂದು ತನ್ನ ವರದಿಯನ್ನು ಕೇಂದ್ರ ಸರಕಾರಕ್ಕೆ ಒಪ್ಪಿಸಿತು. ಅಶೋಕ ಮೆಹ್ತಾ ವರದಿಯು ಎರಡು ಹಂತದ ಆಡಳಿತವನ್ನು ಸೂಚಿಸಿದೆ. ಒಂದು ಮಂಡಲ ಪಂಚಾಯತ ಮತ್ತು ಎರಡನೆಯದು ಜಿಲ್ಲಾ ಪರಿಷತ್ತು. ಇವೆರಡೂ ಜನತೆಯಿಂದ ನೇರವಾಗಿ ಆಯ್ಕೆಯಾದವುಗಳು. ಇವುಗಳ ಮಧ್ಯದಲ್ಲಿದ್ದ ತಾಲೂಕಾ ಅಭಿವೃದ್ಧಿ ಮಂಡಳವನ್ನು ತೆಗೆದು ಹಾಕಲು ಇದು ಸೂಚಿಸಿದೆ. ತಾಲೂಕಾ ಅಭಿವೃದ್ಧಿ ಮಂಡಳದ ಕಾರ್ಯಗಳನ್ನು ಮಂಡಲ ಪಂಚಾಯತಗಳಿಗೆ ವರ್ಗಾಯಿಸಲು ಇದು ಸೂಚಿಸಿದೆ.

---

೧೭ The Karnataka Village Panchayat and Local Boards Act, 1959.

೧೮ ದ್ವಿತೀಯ ಚುನಾವಣೆಯು ೧೯೬೮ ರಲ್ಲಿ

ಕರ್ನಾಟಕ ರಾಜ್ಯ ಸರಕಾರವು ನೇಮಿಸಿದ (೧೯೬೩) ಕೊಂಡಜ್ಜಿ ಬಸಪ್ಪ ಕಮಿಟಿಯು ತನ್ನ ವರದಿಯಲ್ಲಿ ಜಿಲ್ಲಾ ಅಭಿವೃದ್ಧಿ ಮಂಡಲ (District Development Council)ದ ಸ್ಥಾನದಲ್ಲಿ ಜಿಲ್ಲಾ ಪರಿಷತ್ತನ್ನು ತರಲು ಸೂಚಿಸಿತ್ತು. ಇದಲ್ಲದೆ ನ್ಯಾಯ ಪಂಚಾಯತಗಳನ್ನೂ ನೇಮಿಸಲು ಇದು ಸೂಚಿಸಿತ್ತು. ಆದರೆ ಆಗಿನ ಕಾಂಗ್ರೆಸ ಸರಕಾರವು ಈ ವರದಿಯ ಆಧಾರದ ಮೇಲೆ ಮಸೂದೆಯನ್ನು ಅಂಗೀಕರಿಸಿದ್ದರೂ (೧೯೬೪) ಅದನ್ನು ಕಾರ್ಯ ರೂಪದಲ್ಲಿ ತಂದಿರಲಿಲ್ಲ.

ಕರ್ನಾಟಕದಲ್ಲಿಯ ಸದ್ಯದ ಜನತಾ ಸರಕಾರವು ಅಶೋಕ ಮೆಹ್ತಾ ಮತ್ತು ಕೊಂಡಜ್ಜಿ ಬಸಪ್ಪ ವರದಿಗಳಲ್ಲಿಯ ಮುಖ್ಯಾಂಶಗಳನ್ನು ಸ್ವೀಕರಿಸಿ ೨೨—೬—೧೯೮೩ ರಂದು ಎರಡು ಹಂತದ ಆಡಳಿತದ ಮಸೂದೆಯನ್ನು (ಮಂಡಲ ಪಂಚಾಯತ ಮತ್ತು ಜಿಲ್ಲಾ ಪರಿಷತ್ತು) ಕರ್ನಾಟಕ ಗೆಜೆಟ್ಟಿನಲ್ಲಿ ಪ್ರಕಟಿಸಿತು. ಈ ಮಸೂದೆಯ ಬಗೆಗೆ ಅಭ್ಯಸಿಸಿ ತನ್ನ ವರದಿಯನ್ನು ಒಪ್ಪಿಸಲು ಶಾಸನಾಂಗವು ಎರಡೂ ಸದನಗಳ ಕೆಲ ಸದಸ್ಯರುಳ್ಳ ಒಂದು ಒಕ್ಕೂಟ ಕಮಿಟಿಯನ್ನು ನಿಯಮಿಸಿತು. ಈ ಕಮಿಟಿಯು ಸುಮಾರು ೨೯ ಸಲ ಸಭೆ ಸೇರಿ ಮತ್ತು ಪಶ್ಚಿಮ ಬಂಗಾಲ, ಮಹಾರಾಷ್ಟ್ರ, ಗುಜರಾತ ಮತ್ತು ಆಂಧ್ರ ರಾಜ್ಯಗಳಿಗೆ ಭೆಟ್ಟಿ ಕೊಟ್ಟು ಅಭ್ಯಸಿಸಿ ೧೯—೧—೧೯೮೪ರಲ್ಲಿ ತನ್ನ ವರದಿಯನ್ನು ಒಪ್ಪಿಸಿತು. ಇದು ಕರ್ನಾಟಕದ ಗೆಜೆಟ್ಟಿನಲ್ಲಿ ಪ್ರಕಟವಾಯಿತು. ೧೬—೭—೧೯೮೫ ರಂದು ರಾಷ್ಟ್ರಾಧ್ಯಕ್ಷರು ಇದಕ್ಕೆ ತಮ್ಮ ಒಪ್ಪಿಗೆ

ಯನ್ನಿತ್ತರು. ೧೪-೮-೧೯೮೫ ರಂದು ಈ ವಿಧೇಯಕವು ಜಾರಿಯಲ್ಲಿ ಬಂದಿತು. ಇದರ ಪ್ರಕಾರ ಪ್ರಥಮ ಚುನಾವಣೆಗಳು ಜನೇವರಿ ೨, ೧೯೮೭ ರಂದು ಜಿಲ್ಲಾ ಪರಿಷತ್ತಿಗೂ ಹಾಗೂ ಜನೇವರಿ ೨೦, ೧೯೮೭ ರಂದು ಮಂಡಲ ಪಂಚಾಯತಗಳಿಗೂ ನಡೆದವು.

ಹೊಸ ವಿಧೇಯಕವಲ್ಲಿ ಎರಡು ಹಂತಗಳಿಗೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಡಲಾಗಿದೆ– ಒಂದು ಮಂಡಲ ಪಂಚಾಯತ ಹಾಗೂ ಮತ್ತೊಂದು ಜಿಲ್ಲಾ ಪರಿಷತ್ತು. ಆ ಕಾರಣದಿಂದ ಈ ವಿಧೇಯಕಕ್ಕೆ ಇವೆರಡರ ಹೆಸರನ್ನಿಡಲಾಗಿದೆ. ಇವಲ್ಲದೆ ಇನ್ನೂ ಎರಡು ಹಂತಗಳನ್ನು ಈ ವಿಧೇಯಕದಲ್ಲಿ ಗುರುತಿಸಬಹುದು– ಒಂದು ಗ್ರಾಮಸಭಾ ಮತ್ತು ಇನ್ನೊಂದು ತಾಲೂಕು ಪಂಚಾಯತ ಸಮಿತಿ. ಈ ರೀತಿ ಒಟ್ಟು ನಾಲ್ಕು ಹಂತಗಳು.

**(೧) ಗ್ರಾಮ ಸಭಾ :**

ಪ್ರತಿಯೊಂದು ಹಳ್ಳಿಗೂ ತನ್ನದೇ ಆದ ಗ್ರಾಮಸಭೆ ಇರುವುದು. ಸುಮಾರು ೮೦೦೦ಕ್ಕಿಂತ ಕಡಿಮೆ ಜನಸಂಖ್ಯೆಯುಳ್ಳ ಪ್ರತಿಯೊಂದು ರೆವೆನ್ಯೂ ಗ್ರಾಮಕ್ಕೂ ಒಂದು ಪ್ರತ್ಯೇಕವಾದ ಗ್ರಾಮಸಭೆ ಇರುವುದು. ಮಲೆನಾಡು ಅಥವಾ ಅರಣ್ಯ ಪ್ರದೇಶಗಳಲ್ಲಿ ೪೦೦೦ಕ್ಕಿಂತ ಕಡಿಮೆ ಜನಸಂಖ್ಯೆಯುಳ್ಳ ರೆವೆನ್ಯೂ ಗ್ರಾಮಕ್ಕೆ ಒಂದು ಗ್ರಾಮಸಭೆಯಿರುವುದು. ಪ್ರತಿ ಗ್ರಾಮಕ್ಕೆ ಒಂದು ಗ್ರಾಮಸಭೆ ಇರುವುದು– ಪ್ರಜಾಪ್ರಭುತ್ವ ಪದ್ಧತಿಯಲ್ಲಿಯ ಶಾಸನಾಂಗವ ಅಸ್ತಿತ್ವವನ್ನು ತೋರಿಸುವುದು. ದೇಶ-

ರಾಷ್ಟ್ರದಲ್ಲಿ ಸಂಸದೀಯ ಸರಕಾರ ಪದ್ಧತಿ ಇರುವಂತೆ ಪ್ರತಿ ಗ್ರಾಮದಲ್ಲಿಯೂ ಈ ಗ್ರಾಮಸಭಾ ಪದ್ಧತಿಯನ್ನು ತರುವುದು ಮೂಲ ಉದ್ದೇಶ. ಆಗ್ಗೆ ಪ್ರಜಾಪ್ರಭುತ್ವವು ವ್ಯಾಪಕವಾಗಿ ಭದ್ರ ಬುನಾದಿಯಾಗುವುದು. ಪ್ರಜಾಪ್ರಭುತ್ವದ ಬೇರುಗಳು ಭದ್ರವಾಗಿ, ಆಳವಾಗಿ, ವ್ಯಾಪಕವಾಗಿ ಹಳ್ಳಿ ಹಳ್ಳಿಗೂ ಇಳಿಯುವವು. ಪ್ರಜಾಪ್ರಭುತ್ವವು ಕರಿಕೆ–ಬೇರುಗಳಂತೆ ಇಡೀ ದೇಶಕ್ಕೇ ಭದ್ರತೆಯನ್ನು ಒದಗಿಸುವದು.

ರಾಷ್ಟ್ರಕ್ಕೆ ಲೋಕಸಭೆ, ರಾಜ್ಯಕ್ಕೆ ವಿಧಾನಸಭೆ ಇದ್ದಂತೆ ಗ್ರಾಮಕ್ಕೆ ಗ್ರಾಮಸಭೆ ಇರುವುದು. ಪ್ರತಿಗ್ರಾಮ ತನ್ನ ಗ್ರಾಮದ ಅಭಿವೃದ್ಧಿಯನ್ನು ತನ್ನ ಗ್ರಾಮಸಭೆಯ ಮುಖಾಂತರ ಮಾಡಿಕೊಳ್ಳಬೇಕೆನ್ನುವುದು ಇದರ ಉದ್ದೇಶ. ತನ್ನ ಕಾಲ ಮೇಲೆ ತಾನು ನಿಲ್ಲಬೇಕು. ತನ್ನ ಏಳ್ಗೆ ತನ್ನ ಕೈಯಲ್ಲಿಯೇ ಇದೆ ಎನ್ನುವುದು ಇದರ ತತ್ವ. ಗ್ರಾಮಸ್ಥರು ಮೇಲಾಧಿಕಾರಿಗಳ ಕಡೆಗೆ ಹೋಗುವುದಲ್ಲ. ಮೇಲಾಧಿಕಾರಿಗಳು ಗ್ರಾಮಗಳ ಕಡೆಗೆ ಬಂದು ಅಭಿವೃದ್ಧಿಗೆ ಸಹಕರಿಸುವುದು. ಪ್ರತಿಯೊಂದು ಗ್ರಾಮ ತನ್ನ ಗ್ರಾಮ ಸಭೆಯ ಮುಖಾಂತರ ನಿರ್ಣಯಗಳನ್ನು ಕೈಕೊಂಡು ಗ್ರಾಮದ ಸರ್ವಾಂಗೀಣ ಅಭಿವೃದ್ಧಿಯನ್ನು ಸಾಧಿಸುವುದು. ಇದು ಗ್ರಾಮರಾಜ್ಯ. ಇದರಲ್ಲಿ ಜಯ ಸಿಕ್ಕರೆ ಅದುವೇ ರಾಮರಾಜ್ಯ. ಆಗ್ಗೆ ಮಹಾತ್ಮಾ ಗಾಂಧೀಜಿಯವರ ಕನಸು ನನಸಾಗುವುದು.

ಮೇಲೆ ಹೇಳಿದ ಪ್ರತಿಯೊಂದು ರೆವೆನ್ಯೂ ಗ್ರಾಮದ ೧೮ ಅಥವಾ ಅದಕ್ಕಿಂತ ಹೆಚ್ಚು ವಯಸ್ಸಿನ ಎಲ್ಲ ಗ್ರಾಮಸ್ಥರೂ

ಆ ಗ್ರಾಮದ ಗ್ರಾಮ ಸಭೆಯ ಸದಸ್ಯರಾಗುವರು. ಕೇವಲ ವಯಸ್ಸು ಮತ್ತು ವಾಸದ ಮೇಲೆ ಗ್ರಾಮಸಭೆಯ ಸದಸ್ಯತ್ವವು ಅವಲಂಬಿಸಿದೆ. ಇದಕ್ಕಾಗಿ ಬೇರೆ ಚುನಾವಣೆಯಿಲ್ಲ. ಪ್ರತಿಯೊಬ್ಬ ವಯಸ್ಕ ಗ್ರಾಮಸ್ಥನೂ ತನ್ನ ಗ್ರಾಮಸಭೆಯ ಮುಖಾಂತರ ತನ್ನ ಗ್ರಾಮದ ಏಳ್ಗೆಯನ್ನು ಕಾಣಬಹುದು. ಚರ್ಚಿಸಿ, ನಿರ್ಣಯಿಸಿ ಗ್ರಾಮಸ್ಥರು ಕಾರ್ಯಪ್ರವೃತ್ತರಾಗಬಹುದು. ಸಹಕಾರ, ಸಹಬಂಧುತ್ವಗಳು ಅತ್ಯವಶ್ಯ. ಮುಖಂಡತ್ವ, ಕಾರ್ಯ ವ್ಯಾಪ್ತಿ ಮತ್ತು ಹಣಕಾಸಿನ ಬಗೆಗೆ ಪ್ರತ್ಯೇಕವಾದ ವ್ಯವಸ್ಥೆ ಇಲ್ಲದ್ದು ಗ್ರಾಮಸಭೆಗೆ ಆಶಕ್ತಿಯನ್ನುಂಟು ಮಾಡಿದೆ. ಈ ಕೊರತೆಯನ್ನು ತುಂಬಲು ಅವು ಮಂಡಳ ಪಂಚಾಯತವ ಬೆನ್ನು ಹತ್ತಬೇಕಾಗುವುದು. ವಿಧೇಯಕದಲ್ಲಿ ಮಂಡಳ ಪಂಚಾಯತಕ್ಕೆ ಪ್ರಾಮುಖ್ಯತೆ ನೀಡಿರುವುದರಿಂದ ಗ್ರಾಮಸಭೆಗಳು ಅಮುಖ್ಯವಾಗಿವೆ. ಇದು ಪಂಚಾಯತ ಆಡಳಿತದ ಮೂಲ ಉದ್ದೇಶಕ್ಕೆ ಕೊಡಲಿ ಪ್ರಾಯವಾಗಿದೆ. ಹಣವಿಲ್ಲದಲ್ಲಿ ಅಧಿಕಾರವೂ ಇಲ್ಲ, ಕಾರ್ಯವೂ ಇಲ್ಲ ಎನ್ನುವಂತಾಗಿದೆ ಗ್ರಾಮಸಭೆಯ ಹಣೆಬರಹ.

## (೨) ಮಂಡಲ ಪಂಚಾಯತ:

ಕರ್ನಾಟಕದ ಹೊಸ ವಿಧೇಯಕದಲ್ಲಿ ಇದು ಒಂದು ಪ್ರಮುಖ ಹಂತ. ಹಿಂದೆ ಅರಸು ಪ್ರಭುತ್ವದಲ್ಲಿ ಚಕ್ರಾಧಿಪತಿಯ ಕೆಳಗೆ ಮಾಂಡಲಿಕ ಅರಸರುಗಳು ಇದ್ದಂತೆ ಈಗಿನ ಜಿಲ್ಲಾ ಪರಿಷತ್ತಿನ ಕೆಳಗೆ ಮಂಡಲ ಪಂಚಾಯತಗಳಿರುವವು. ಆದರೆ ಅರಸು ಪ್ರಭುತ್ವವೇ ಬೇರೆ ಪ್ರಜಾಪ್ರಭುತ್ವವೇ ಬೇರೆ.

ಪ್ರತಿಯೊಂದು ತಾಲೂಕಿನಲ್ಲಿ ಹಲವು ಮಂಡಲ ಪಂಚಾಯಿತಗಳನ್ನು ಜನಸಂಖ್ಯೆಯ ಆಧಾರದ ಮೇಲೆ ರಚಿಸಲಾಗುವುದು. ೮೦೦೦ ದಿಂದ ೧೨೦೦೦ಕ್ಕೂ ಮೀರದ ಜನಸಂಖ್ಯೆಯುಳ್ಳ ರೆವಿನ್ಯೂ ಗ್ರಾಮ ಅಥವಾ ಗ್ರಾಮಗಳ ಗುಂಪಿಗೆ ಒಂದು ಮಂಡಲ ಪಂಚಾಯಿತ ಎಂದು ಜಿಲ್ಲಾಧಿಕಾರಿಯು ಘೋಷಿಸುವನು. ಮಲೆನಾಡು ಮತ್ತು ಅರಣ್ಯ ಪ್ರದೇಶಗಳಲ್ಲಿ[೧೯] ನಿಗದಿತ ಜನಸಂಖ್ಯೆ ಕನಿಷ್ಠ ೪೦೦೦. ಮಂಡಲ ಪಂಚಾಯಿತವು ತನ್ನ ಮತದಾರರಿಂದ[೨೦] ನೇರವಾಗಿ ಆಯ್ಕೆಯಾಗುವುದು. ಪ್ರತಿ ೪೦೦ ಜನರಿಗೆ ಒಬ್ಬರಂತೆ ಸದಸ್ಯರನ್ನು ಚುನಾಯಿಸಲಾಗುವುದು. ಆದರೆ ಪ್ರತಿ ಮಂಡಲದಲ್ಲಿ ೨೦ ರಿಂದ ೩೦ ಸದಸ್ಯರಿರುವರು. ಅರಣ್ಯಪ್ರದೇಶ ಮತ್ತು ಮಲೆನಾಡಿನಲ್ಲಿ ಸದಸ್ಯರ ಸಂಖ್ಯೆ ೧೦. ಶೇಕಡಾ ೨೫ರಷ್ಟು ಸ್ಥಾನಗಳು ಮಹಿಳೆಯರಿಗೆ ಮೀಸಲು. ಅದರಲ್ಲಿ ಒಂದು ಸ್ಥಾನವನ್ನು ಪರಿಶಿಷ್ಟ ಜಾತಿ ಅಥವಾ ಜನಾಂಗದ ಮಹಿಳೆಗೆ ಕೊಡಬೇಕು. ಶೇಕಡಾ ೧೮ರಷ್ಟು ಸ್ಥಾನಗಳು ಪರಿಶಿಷ್ಟ ಜಾತಿ ಮತ್ತು ಪಂಗಡದವರಿಗೆ ಮೀಸಲು. ಇದಲ್ಲದೆ ಹಿಂದುಳಿದ ವರ್ಗದವರು ಚುನಾಯಿತರಾಗದಿದ್ದಲ್ಲಿ, ಜಿಲ್ಲಾಪರಿಷತ್ತಿನ ಆ ವರ್ಗದವರಲ್ಲಿ ಇಬ್ಬರನ್ನು ನಾಮಕರಣ ಮಾಡಲಾಗುವುದು. ಮಂಡಲ ಪಂಚಾಯಿತದ

---

೧೯ ದಕ್ಷಿಣ ಕನ್ನಡ, ಉತ್ತರ ಕನ್ನಡ, ಚಿಕ್ಕಮಗಳೂರು, ಕೊಡಗು ಮತ್ತು ಶಿವಮೊಗ್ಗಾ ಜಿಲ್ಲೆಗಳು

೨೦ ಅಭ್ಯರ್ಥಿ ಮತ್ತು ಮತದಾರರ ವಯಸ್ಸು ಕನಿಷ್ಠ–೧೮ ವರ್ಷ

ಚುನಾಯಿತ ಸದಸ್ಯರು ತಮ್ಮಲ್ಲಿ ಒಬ್ಬರನ್ನು ಪ್ರಧಾನರನ್ನಾಗಿ ಹಾಗೂ ಒಬ್ಬರನ್ನು ಉಪಪ್ರಧಾನರನ್ನಾಗಿ ಆಯ್ಕೆಮಾಡುವರು. ಮಂಡಲ ಪಂಚಾಯತದ ಕಾರ್ಯಾವಧಿಯು ೫ ವರ್ಷಗಳು. ಮಂಡಲ ಪಂಚಾಯತದ ಪ್ರಧಾನ ಕಚೇರಿಯು ಅದರ ವ್ಯಾಪ್ತಿಯ ಅತಿದೊಡ್ಡ ಹಳ್ಳಿ (ಕನಿಷ್ಠ ೨೦೦೦ ಜನಸಂಖ್ಯೆ) ಯಲ್ಲಿ ಸ್ಥಾಪಿತವಾಗುವದು. ಸಾಮಾನ್ಯವಾಗಿ ಅದು ಮಧ್ಯವರ್ತಿಯಾಗಿದ್ದು, ಸರ್ವಋತು ರಸ್ತೆ, ಕನಿಷ್ಠ ಒಂದು ಗ್ರಾಮೀಣ ಅಥವಾ ವಾಣಿಜ್ಯ ಬ್ಯಾಂಕು ಹಾಗೂ ಆರೋಗ್ಯ ಕೇಂದ್ರ ಹೊಂದಿರುವದು. ಪ್ರತಿ ಮಂಡಲ ಪಂಚಾಯತಕ್ಕೆ ಒಬ್ಬ ಕಾರ್ಯದರ್ಶಿ ಇರುವನು. ಅವನು ಜಿಲ್ಲಾ ಪರಿಷತ್ತಿನಿಂದ ಮಂಡಲ ಪಂಚಾಯತದ ಒಪ್ಪಿಗೆಯ ಮೇರೆಗೆ ನಿಯಮಿಸಲ್ಪಡುವನು. ಜಿಲ್ಲೆಯ ಸಿಬ್ಬಂದಿಯಿಂದ ಬಂದ ಆತನಿಗೆ ಜಿಲ್ಲಾ ಪರಿಷತ್ತು ಪಗಾರವನ್ನು ಕೊಡುವದು. ಇನ್ನುಳಿದ ಕೆಳವರ್ಗದ ಸಿಬ್ಬಂದಿಗೆ ಮಂಡಳ ಪಂಚಾಯತವು ಹೊಣೆಯಾಗಿದೆ.

ಮಂಡಲ ಪಂಚಾಯತದ ಕಾರ್ಯವ್ಯಾಪ್ತಿಯು ಈ ಕೆಳಗಿನಂತಿದೆ.[೨೧]

೧. ಗ್ರಾಮಗಳ ನೈರ್ಮಲ್ಯ ಮತ್ತು ಆರೋಗ್ಯ ಪಾಲನೆ
೨. ಲೋಕೋಪಯೋಗಿ ಕಾಮಗಾರಿ ಮತ್ತು ಸೌಕರ್ಯ
೩. ದೀನದಲಿತ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ
೪. ಕೃಷಿ ಮತ್ತು ಪಶು ಸಂಗೋಪನೆ

---

೨೧ ಕರ್ನಾಟಕ ವಾರ್ತೆ

೫. ಸರ್ಕಾರದ ಧಾನ್ಯಾಗಾರ ಸಂರಕ್ಷಣೆ
೬. ಪುಸ್ತಕಾಲಯ ಮತ್ತು ವಾಚನಾಲಯಗಳ ಸ್ಥಾಪನೆ
೭. ನೈಸರ್ಗಿಕ ವಿಕೋಪ ಮತ್ತು ಅಭಾವ ಪರಿಸ್ಥಿತಿಯಲ್ಲಿ ಗ್ರಾಮಸ್ಥರಿಗೆ ನೆರವು.
೮. ಆರಣ್ಯ ಮತ್ತು ಕೃಷಿ ಅರಣ್ಯಗಳ ಅಭಿವೃದ್ಧಿ
೯. ಗೃಹ ಕೈಗಾರಿಕೆಗಳ ಮತ್ತು ಸ್ಥಳೀಯ ಕುಶಲ ಕಲಾ ಅಭಿವೃದ್ಧಿ.
೧೦. ಗ್ರಾಮೀಣ ಕ್ರೀಡೆ ಮತ್ತು ಸಾಂಸ್ಕೃತಿಕ ಚಟುವಟಿಕೆಗಳ ಉತ್ತೇಜನ.
೧೧. ಹಿಂದುಳಿದ ಪರಿಶಿಷ್ಟ ಜಾತಿ, ವರ್ಗ ಅಲ್ಲದೆ ಮಹಿಳೆಯರ ಹಿತಾಸಕ್ತಿ, ಕೆರೆ ಬಾವಿಗಳ ನಿರ್ಮಾಣ ನಿರ್ವಹಣೆ ಮತ್ತು ನೀರು ಸರಬರಾಜು.
೧೨. ಸಹಕಾರಿ ಸಂಘಗಳ ಅಭಿವೃದ್ಧಿ.
೧೩. ಪ್ರಾಥಮಿಕ ಹಾಗೂ ವಯಸ್ಕರ ಶಿಕ್ಷಣದ ಮೇಲೆ ಉಸ್ತುವಾರಿ.

ಮಂಡಲ ಪಂಚಾಯತದ ಹಣಕಾಸು ವ್ಯವಸ್ಥೆಯು ಕೆಳಗಿನಂತಿದೆ :

೧. ಮನರಂಜನೆ ಮತ್ತು ಮಾರುಕಟ್ಟೆ ಮೇಲೆ ವಿಧಿಸಿದ ತೆರಿಗೆ
೨. ನೀರಿನ ಮೇಲೆ ವಿಧಿಸಿದ ತೆರಿಗೆ
೩. ವಿವಿಧ ಮೂಲಗಳಿಂದ ಬಂದ ಧನಸಹಾಯ
೪. ಇತರ ಸ್ಥಳೀಯ ತೆರಿಗೆಗಳು

—ಮೇಲಿನ ಎಲ್ಲ ಮೂಲದಿಂದ ಸುಮಾರು ೨೦,೦೦೦ ರೂ. ಹಣ ಲಭಿಸುವುದು. ಇದಲ್ಲದ ಸರಕಾರ ಪ್ರತಿಮಂಡಲಕ್ಕೆ ಸುಮಾರು ಒಂದು ಲಕ್ಷ ರೂ. ಧನಸಹಾಯ ಮಾಡುವದು. ಒಟ್ಟಿನಲ್ಲಿ ಮಂಡಲ ಪಂಚಾಯತದ ಆರ್ಥಿಕ ಹಾಗೂ ಆಡಳಿತ ವಿಷಯಗಳು ಜಿಲ್ಲಾ ಪರಿಷತ್ತಿನ ಮೇಲ್ವಿಚಾರಣೆಗೆ ಒಳಪಡುತ್ತವೆ

ಮಂಡಲ ಪಂಚಾಯತಕ್ಕೆ ತನ್ನದೇ ಆದ ಮೂರು ಸಮಿತಿಗಳಿರುವವು. (೧) ಉತ್ಪಾದನಾ ಸಮಿತಿ. (೨) ಸಾಮಾಜಿಕ ನ್ಯಾಯ ಸಮಿತಿ ಮತ್ತು (೩) ಸೌಕರ್ಯ ಸಮಿತಿ. ಮೊದಲಿನ ಎರಡಕ್ಕೆ ಪಂಚಾಯತದ ಪ್ರಧಾನರು ಹಾಗೂ ಕೊನೆಯದಕ್ಕೆ ಉಪಪ್ರಧಾನರು ಚೇರ್ಮನ್ನರಾಗಿರುವರು.

**೩. ತಾಲೂಕಾ ಪಂಚಾಯತ ಸಮಿತಿ:**

ಇದು ಕರ್ನಾಟಕದ ಹೊಸ ವಿಧೇಯಕದ ಮೂರನೆಯ ಹಂತವು. ಇದಕ್ಕೆ ವಿಧೇಯಕದಲ್ಲಿ ಅಷ್ಟೊಂದು ಪ್ರಾಮುಖ್ಯತೆಯನ್ನು ಕೊಟ್ಟಿಲ್ಲ. ಮೊದಲಿನ ತಾಲೂಕಾ ಅಭಿವೃದ್ಧಿ ಮಂಡಳಿಯು ಹೆಚ್ಚು ಪ್ರಾಮುಖ್ಯತೆ ಪಡೆದಿತ್ತು. ತಾಲೂಕು ಪಂಚಾಯತ ಸಮಿತಿಯಲ್ಲಿ ಈ ಕೆಳಗಿನವರು ಸದಸ್ಯರಾಗಿರುವರು.

೧. ತಾಲೂಕನ್ನು ಪ್ರತಿನಿಧಿಸುವ ರಾಜ್ಯ ವಿಧಾನ ಮಂಡಲದ ಸದಸ್ಯರು.

೨. ತಾಲೂಕಿಗೆ ಸೇರಿದ ಜಿಲ್ಲಾ ಪರಿಷತ್ತಿನ ಸದಸ್ಯರು

೩. ತಾಲೂಕಿನ ಮಂಡಲ ಪಂಚಾಯತಗಳ ಪ್ರಧಾನರು

೪. ಇವರು–ಹರಿಜನ ಗಿರಿಜನ, ಹಿಂದುಳಿದ ವರ್ಗ ಮತ್ತು ಮಹಿಳಾ ಸದಸ್ಯರನ್ನು ನಾಮಕರಣ ಮಾಡಲು ಅವಕಾಶವಿದೆ.

೫. ವ್ಯವಸಾಯೋತ್ಪನ್ನ ಸಹಕಾರಿ ಮಾರುಕಟ್ಟೆಯ ಅಧ್ಯಕ್ಷರು ಮತ್ತು ಭೂ ಅಭಿವೃದ್ಧಿ ಬ್ಯಾಂಕಿನ ಅಧ್ಯಕ್ಷರು ಸಹ ಅಧಿಕಾರಿ ನಾತೆಯಿಂದ ಸದಸ್ಯರು.

ತಾಲೂಕಾ ಪಂಚಾಯತ ಸಮಿತಿಗೆ ತಾಲೂಕಿನ ಶಾಸಕ (M.L.A.)ರು ಅಧ್ಯಕ್ಷರು ಹಾಗೂ ಕ್ಷೇತ್ರಾಭಿವೃದ್ಧಿ ಅಧಿಕಾರಿಯು ಕಾರ್ಯದರ್ಶಿಯು. ಈ ರೀತಿ ಪ್ರತಿ ತಾಲೂಕಿಗೆ ಒಂದು ತಾಲೂಕು ಪಂಚಾಯತ ಸಮಿತಿ ಇರುವದು. ಇದರ ಕಾರ್ಯವ್ಯಾಪ್ತಿಯು ಕೆಳಗಿನಂತಿದೆ.

೧. ತಾಲೂಕಿನ ಎಲ್ಲ ಅಭಿವೃದ್ಧಿ ಕಾರ್ಯಕ್ರಮಗಳ ಮೇಲ್ವಿಚಾರಣೆ.
೨. ತಾಲೂಕು ಮಟ್ಟದ ಯಾವುದೇ ಅಭಿವೃದ್ಧಿ ಕಾರ್ಯಕ್ರಮದ ತನಿಖೆ.
೩. ತಾಲೂಕಿನಲ್ಲಿಯ ಮಂಡಲ ಪಂಚಾಯತಗಳ ಪರಿಶೀಲನೆ, ಮಾರ್ಗದರ್ಶನ ಮತ್ತು ನೆರವು.
೪. ತಾಲೂಕಿನ ಸಮಗ್ರ ಅಭಿವೃದ್ಧಿ ಯೋಜನೆಯ ತಯಾರಿಕೆ, ನಿರ್ವಹಣೆ ಮತ್ತು ಪರಿಶೀಲನೆ.

ಇದಕ್ಕೆ ಪ್ರತ್ಯೇಕವಾದ ಆಡಳಿತ ವ್ಯವಸ್ಥೆ ಇಲ್ಲ. ಜಿಲ್ಲಾ ಪರಿಷತ್ತನ್ನು ಇದು ಆಶ್ರಯಿಸಬೇಕಾಗುವದು.

## ೪. ಜಿಲ್ಲಾ ಪರಿಷತ್ತು :

ಕರ್ನಾಟಕದ ಹೊಸ ವಿಧೇಯಕದ ಪ್ರಕಾರ ಜಿಲ್ಲಾಪರಿಷತ್ತು ನಾಲ್ಕನೆಯ ಹಂತ ಹಾಗೂ ಅತಿ ಪ್ರಮುಖವಾದ ಹಂತ. ಪಂಚಾಯತ ಆಡಳಿತಕ್ಕೆ ಮತ್ತು ಗ್ರಾಮರಾಜ್ಯಕ್ಕೆ ಇದು ಕೇಂದ್ರ ಬಿಂದು. ರಾಜ್ಯಸರಕಾರವು ಪಂಚಾಯತ ಆಡಳಿತಕ್ಕೆ ಹಾಗೂ ಹಳ್ಳಿಗಾಡಿನ ಅಭಿವೃದ್ಧಿಗೆ ಸಂಬಂಧಿಸಿದ ಅಧಿಕಾರವನ್ನು ಜಿಲ್ಲಾ ಪರಿಷತ್ತುಗಳಿಗೆ ವಿಕೇಂದ್ರೀಕರಣದ ಮುಖಾಂತರ ಹಸ್ತಾಂತರಿಸಿದಂತಿದೆ. ಜಿಲ್ಲೆಯ ಅಭಿವೃದ್ಧಿಯ ಹಾಗೂ ಆಡಳಿತದ ಹೊಣೆ ಜಿಲ್ಲಾ ಪರಿಷತ್ತಿನ ಮೇಲೆ ಬಿದ್ದಂತಿದೆ.

ಪ್ರತಿಯೊಂದು ಜಿಲ್ಲೆಗೆ ಒಂದು ಜಿಲ್ಲಾ ಪರಿಷತ್ತು ಇರುವುದು. ಈ ಪರಿಷತ್ತು ಜನರಿಂದ ನೇರವಾಗಿ ಆಯ್ಕೆಯಾಗುವುದು. ಇದಕ್ಕೆ ಪ್ರಥಮ ಚುನಾವಣೆಯು ಜನೇವರಿ ೨, ೧೯೮೭ ರಂದು ನಡೆಯಿತು. ಬೆಂಗಳೂರು ನಗರ ಜಿಲ್ಲೆಯನ್ನು ಬಿಟ್ಟು ಉಳಿದೆಲ್ಲ ೧೯ ಜಿಲ್ಲೆಗಳ ಪರಿಷತ್ತುಗಳಿಗೆ ಈ ಚುನಾವಣೆ ಇತ್ತು. ಜಿಲ್ಲಾ ಪರಿಷತ್ತು ಹಾಗೂ ಮಂಡಲ ಪಂಚಾಯತಗಳಿಗೆ ಒಂದೇ ಮತದಾರರ ಪಟ್ಟಿಯಿರುವುದಲ್ಲದೆ, ಅಭ್ಯರ್ಥಿ ಹಾಗೂ ಮತದಾರರ ವಯಸ್ಸು ಕನಿಷ್ಟ ೧೮ ವರ್ಷ ಇರುವದು. ವಯಸ್ಸು ಮತ್ತು ಚುನಾವಣಾ ಕ್ಷೇತ್ರದಲ್ಲಿ ವಾಸ– ಇವೆರಡು ಮಾತ್ರ ಅರ್ಹತೆ (ಅಭ್ಯರ್ಥಿ ಮತ್ತು ಮತದಾರ) ಯನ್ನು ನಿಗದಿಪಡಿಸುವವು.

ಜಿಲ್ಲೆಯ ಪ್ರತಿಯೊಂದು ತಾಲೂಕಿನಿಂದ ನಿಗದಿಪಡಿಸಿದ ಸಂಖ್ಯೆಯಲ್ಲಿ ಸದಸ್ಯರು ಜಿಲ್ಲಾ ಪರಿಷತ್ತಿಗೆ ನೇರವಾಗಿ ಆಯ್ಕೆ

ಮತದಾರ ಕ್ಷೇತ್ರದಿಂದ ಆಯ್ಕೆಯಾಗಿ ಬರುವರು. ಪ್ರತಿ ೨೮೦೦೦ ಜನಸಂಖ್ಯೆಗೆ ಒಬ್ಬರಂತೆ ಸದಸ್ಯರನ್ನು ಜಿಲ್ಲಾ ಪರಿಷತ್ತಿಗೆ ಆಯ್ಕೆಮಾಡಲಾಗುವುದು. ಕೊಡಗು ಜಿಲ್ಲೆಯಲ್ಲಿ ಮಾತ್ರ ಪ್ರತಿ ೧೨,೦೦೦ ಜನಸಂಖ್ಯೆಗೆ ಒಬ್ಬರಂತೆ ಸದಸ್ಯರನ್ನು ಆಯ್ಕೆ ಮಾಡಲಾಗುವುದು. ಜಿಲ್ಲಾಧಿಕಾರಿಯು ಚುನಾವಣೆಯ ಪೂರ್ವದಲ್ಲಿಯೇ ಪ್ರತಿ ತಾಲೂಕಿನ ಸದಸ್ಯರ ಸಂಖ್ಯೆಯನ್ನು ಹಾಗೂ ಅವರ ಮತಕ್ಷೇತ್ರಗಳನ್ನೂ ನಿಗದಿಪಡಿಸುವರು.[೨೨] ಬೆಳಗಾಂವ ಜಿಲ್ಲೆಯ ಜಿಲ್ಲಾ ಪರಿಷತ್ತು ಗಾತ್ರದಲ್ಲಿ ಅತಿ ದೊಡ್ಡದಿದ್ದು (೬೩) ಉತ್ತರ ಕನ್ನಡ ಜಿಲ್ಲೆಯ ಜಿಲ್ಲಾ ಪರಿಷತ್ತು ಅತಿ ಚಿಕ್ಕದಿರುವದು (೨೮).

ಚುನಾಯಿತ ಸದಸ್ಯರಲ್ಲದೆ ಆಯಾ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ವಿಧಾನ ಮಂಡಲಗಳ ಸದಸ್ಯರು ಮತ್ತು ಸಂಸತ್ತಿನ ಸದಸ್ಯರು ಸಹ ಆಯಾ ಜಿಲ್ಲಾ ಪರಿಷತ್ತಿನ ಸದಸ್ಯರಾಗುವರು. ಹಾಗೂ ಅವರಿಗೆ ಜಿಲ್ಲಾ ಪರಿಷತ್ತಿನ ಕಾರ್ಯಕಲಾಪಗಳಲ್ಲಿ ಮತ ಚಲಾಯಿಸುವ ಅಧಿಕಾರವುಂಟು. ಈ ಕಾರಣದಿಂದ ಜಿಲ್ಲಾ ಪರಿಷತ್ತಿನ ಪ್ರಥಮ ಚುನಾವಣಾನಂತರ ಐದು ಜಿಲ್ಲೆಗಳಲ್ಲಿ ಜನತಾ ಪಕ್ಷವು ಬಹುಮತ ಸಾಧಿಸುವುದು. ಕಾಂಗ್ರೆಸ್ (ಆಯ್) ದ ಮುಖಂಡರು (ಶ್ರೀ ಮೊಯ್ಲಿ) ಶಾಸಕರಿಗೆ ಮತಾಧಿಕಾರವನ್ನು ನಿರಾಕರಿಸುತ್ತಿರುವರು. ಬಳವಂತರಾಯ ಮೆಹ್ತಾ ವರದಿಯ ಪ್ರಕಾರ ಶಾಸಕರು ಮತಾಧಿಕಾರವಿಲ್ಲದ ಸದಸ್ಯರು ಮಾತ್ರ.

---

೨೨ ಅನುಬಂಧ ಸಂ. ೨, ೩ ಮತ್ತು ೪ ನೋಡಿರಿ.

ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕಿನ ಮುಖ್ಯಸ್ಥರು ಸಹ ಜಿಲ್ಲಾ
ಪರಿಷತ್ತಿನ ಸದಸ್ಯರಾಗುವರು.

ಮಂಡಲ ಪಂಚಾಯತದಲ್ಲಿರುವಂತೆ ಜಿಲ್ಲಾ ಪರಿಷತ್ತಿಗೂ
ಮೀಸಲಾತಿ ಸೌಲಭ್ಯ ಇರುವದು (ಮಹಿಳೆಯರಿಗೆ ಶೇ. ೨೫
ಅದರಲ್ಲಿ ಒಬ್ಬರು ಪರಿಶಿಷ್ಟ ಜಾತಿ ಅಥವಾ ಜನಾಂಗದವ
ಹಾಗೂ ಪರಿಶಿಷ್ಟ ಜಾತಿ ಹಾಗೂ ಪಂಗಡಗಳಿಗೆ ಶೇ. ೧೮)
ಜಿಲ್ಲಾ ಪರಿಷತ್ತಿನ ಪ್ರಥಮ ಚುನಾವಣೆಯಲ್ಲಿ (ಜ. ೨. ೧೯೮
ಬೆಂಗಳೂರು ನಗರ ಜಿಲ್ಲೆಯನ್ನು ಬಿಟ್ಟು ಉಳಿದೆಲ್ಲ ೧೮ ಜಿಲ್ಲೆಗಳ
ಭಾಗವಹಿಸಿದ್ದವು. ಸುಮಾರು ೧೪೦ ಲಕ್ಷ ಮತದಾರರಿದ್ದರು
ಜಿಲ್ಲಾ ಪರಿಷತ್ತಿನ ಒಟ್ಟು ಸ್ಥಾನಗಳು ೮೮೭. ಶ್ರೀಮತಿ ಜಿ
ರಾಮು (ರಾಜಗೋಪಾಲರೆಡ್ಡಿ), ಗೌರಿಬಿದನೂರು ತಾಲೂಕಿ
ವಿದುರಾಶ್ವಥ ಮಹಿಳಾ ಮೀಸಲು ಕ್ಷೇತ್ರದಿಂದ ಅವಿರೋ
ವಾಗಿ ಆಯ್ಕೆಯಾಗಿ ಜನತಾಪಕ್ಷಕ್ಕೆ ಪ್ರಥಮ ಜಯವನ್
ತಂದುಕೊಟ್ಟರು. ಪ್ರಥಮ ಚುನಾವಣಾ ಪರಿಣಾಮವು ಪ
ಗಳಿಗೆ ಈ ಮುಂದಿನಂತೆ ಬಲಾಬಲವನ್ನು ಕೊಟ್ಟಿದೆ. ಜನ
ಪಕ್ಷ– ೪೫೦: ಕಾಂಗ್ರೆಸ್ (ಆಯ್) ೩೯೪: ಎಂ.ಇ.ಎಸ್.–
ಬಿ.ಜೆ.ಪಿ.–೬: ಕಾಂಗ್ರೆಸ್ (ಆರ್.ಜಿ.)–೨: ಸಿ.ಪಿ.ಆಯ್.ಮತ್ತ
ಸಿ.ಪಿ.ಎಂ. ತಲಾ ಒಂದು ಹಾಗೂ ಸ್ವತಂತ್ರರು–೨೧.
ಚುನಾವಣೆಯ ವೈಶಿಷ್ಟ್ಯವೆಂದರೆ ಅಧಿಕಾರಾರೂಢ ಜನತಾ ಪಕ್ಷ
ಶಹರದಿಂದ ಹಳ್ಳಿಗಳಿಗೂ ಹಾಗೂ ಸುಶಿಕ್ಷಿತರಿಂದ ಅಶಿಕ್ಷಿತರಿಗ
ತನ್ನ ಪಕ್ಷದ ಬೇರುಗಳನ್ನು ಆಳಕ್ಕೆ ಇಳಿಸುವುದ

ಅಧಿಕಾರಿಯಾದ ಕಲೆಕ್ಟರನು ಕಾರ್ಯದರ್ಶಿಯು. ಅಧ್ಯಕ್ಷನು ತನ್ನ ಇಡೀ ಜಿಲ್ಲೆಗೆ ಮುಖ್ಯಸ್ಥನು.

ಜಿಲ್ಲಾ ಪರಿಷತ್ತಿನ ಕಾರ್ಯವ್ಯಾಪ್ತಿಯು ಈ ಕೆಳಗಿನಂತಿದೆ: [೨೩]

೧. ಜಿಲ್ಲೆಯ ಸಮಗ್ರ ಬೆಳವಣಿಗೆಯ ಹೊಣೆ. ತಾಲೂಕು ಹಾಗೂ ಜಿಲ್ಲಾ ಮಟ್ಟಗಳ ಒಟ್ಟು ಮೇಲ್ವಿಚಾರಣೆ. ಸಮನ್ವಯ ಹಾಗೂ ಸರ್ವತೋಮುಖ ಹೊಂದಾಣಿಕೆ.

೨. ಕೃಷಿ ಉತ್ಪಾದನೆ ಹೆಚ್ಚಿಸುವ ಕಾರ್ಯಕ್ರಮಗಳಿಗೆ ಪ್ರೋತ್ಸಾಹ.

೩. ಸುಧಾರಿತ ಕೃಷಿಪದ್ಧತಿ ಮತ್ತು ಉಪಕರಣಗಳ ಬಳಕೆಯನ್ನು ಜನಪ್ರಿಯಗೊಳಿಸುವದು.

೪. ಜಿಲ್ಲಾ, ತಾಲೂಕು ಮತ್ತು ಗ್ರಾಮೀಣ ಪಶು ವೈದ್ಯ ಶಾಲೆಗಳ ಪ್ರಥಮ ಚಿಕಿತ್ಸೆ ಮತ್ತು ಸಂಚಾರಿ ಪಶುವೈದ್ಯ ಔಷಧಾಲಯಗಳ ನಿರ್ವಹಣೆ.

೫. ಅನುಸೂಚಿತ ಜಾತಿ, ಪಂಗಡ ಮತ್ತು ಹಿಂದುಳಿದ ವರ್ಗಗಳ ಶೈಕ್ಷಣಿಕ, ಆರ್ಥಿಕ, ಸಾಂಸ್ಕೃತಿಕ ಮತ್ತು ಸಾಮಾಜಿಕ ಅಭಿವೃದ್ಧಿ ಮತ್ತು ರಕ್ಷಣೆ.

೬. ಜಿಲ್ಲಾ ರಸ್ತೆ, ಸೇತುವೆಗಳ ನಿರ್ಮಾಣ ಮತ್ತು ನಿರ್ವಹಣೆ.

---

೨೩ ಕರ್ನಾಟಕ ವಾರ್ತೆ.

೭. ಅಂತರ್ಜಲ ಸಂಪನ್ಮೂಲಗಳ ಅಭಿವೃದ್ಧಿ.

೮. ಸಣ್ಣ ನೀರಾವರಿ ಯೋಜನೆಗಳ ನಿರ್ಮಾಣ, ನಿರ್ವಹಣೆ, ನವೀಕರಣ ಮತ್ತು ನ್ಯಾಯ ಸಮ್ಮತ ಹಂಚಿಕೆ.

೯. ಗ್ರಾಮೀಣ ಉದ್ಯಾನ ಮತ್ತು ತೋಟಗಳ ಅಭಿವೃದ್ಧಿ.

೧೦. ಸಹಕಾರಿ ಸಂಘಗಳಿಗೆ ಪ್ರೋತ್ಸಾಹ ಮತ್ತು ಬೆಳವಣಿಗೆಗೆ ಸಹಾಯ.

೧೧. ವಯಸ್ಕರ ಶಿಕ್ಷಣ, ಪ್ರಾಥಮಿಕ, ಮಾಧ್ಯಮಿಕ ಶಾಲೆಗಳ ವ್ಯವಸ್ಥೆ ಮತ್ತು ನಿರ್ವಹಣೆ.

೧೨. ಗ್ರಾಮೀಣ ವಿದ್ಯುದ್ದೀಕರಣ ಮತ್ತು ಅತ್ಯವಶ್ಯ ವಸ್ತುಗಳ ವಿತರಣೆ.

ಒಟ್ಟಿನಲ್ಲಿ ಜಿಲ್ಲೆಯ ಗ್ರಾಮ ಸಮುದಾಯದ ಅಭಿವೃದ್ಧಿಯ ಹೊಣೆ ಇದರ ಮೇಲಿದೆ. ಈ ಸಂಬಂಧ ಇದರ ಕೆಳಗೆ ೯ ಸ್ಥಾಯಿ ಸಮಿತಿಗಳು ಕಾರ್ಯ ನಿರ್ವಹಿಸುವವು.

ಜಿಲ್ಲಾ ಪರಿಷತ್ತಿನ ಹಣಕಾಸಿನ ವ್ಯವಸ್ಥೆಯು ಈ ಕೆಳಗಿನಂತಿದೆ:

೧. ರಾಜ್ಯ ಸರಕಾರದಿಂದ ವರ್ಗಾಯಿಸಲ್ಪಟ್ಟ ಅಲ್ಲದೆ ಕೊಡುವ ಸಹಾಯಧನ ಮತ್ತು ಸಾಲ ಸೌಲಭ್ಯ.

೨. ಜಿಲ್ಲಾ ಪರಿಷತ್ತು ಮತ್ತು ಅದರ ಪರವಾಗಿ ವಿಧಿಸಿದ ದಂಡ, ತೆರಿಗೆ ಮತ್ತು ಶುಲ್ಕ.

೩. ಜಿಲ್ಲಾ ಪರಿಷತ್ತಿನ ಆಸ್ತಿಯಿಂದ ಬರುವ ಬಾಡಿಗೆ.

೪. ಜನರ ಮತ್ತು ಸಂಘ ಸಂಸ್ಥೆಗಳು ಕೊಡುವ ಕೊಡುಗೆ, ಅನುದಾನ, ಬಡ್ಡಿ ಮತ್ತು ಲಾಭ.

೫. ಜಿಲ್ಲಾ ಪರಿಷತ್ತು ಮಾರಿದ ಜಮೀನು ಮತ್ತು ಆಸ್ತಿಯಿಂದ ಬರುವ ಹಣ.

ರಾಜ್ಯಸರಕಾರ ಪ್ರತಿಜಿಲ್ಲೆಗೆ ಸುಮಾರು ೨ ಕೋಟಿ ರೂಪಾಯಿಗಳನ್ನು ವಿತರಿಸುತ್ತದೆ. ಮಂಡಲ ಪಂಚಾಯತ ಮತ್ತು ಜಿಲ್ಲಾ ಪರಿಷತ್ತುಗಳ ವ್ಯವಸ್ಥೆಗೆ ಸರ್ಕಾರಕ್ಕೆ ತಗಲುವ ವೆಚ್ಚ ಸುಮಾರು ೩.೫ ಕೋಟಿ ರೂಪಾಯಿಗಳು. ಏಳನೇಯ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಕರ್ನಾಟಕ ಸರಕಾರವು ಮಂಡಲ ಪಂಚಾಯತ ಹಾಗೂ ಜಿಲ್ಲಾ ಪರಿಷತ್ತುಗಳಿಗೆ ೯೦೦ ಕೋಟಿ ರೂಪಾಯಿಗಳನ್ನು ಅಭಿವೃದ್ಧಿಗಾಗಿ ಕೊಡುವ ಸನ್ನಾಹ ದಲ್ಲಿದೆ.

## ೭. ಪಂಚಾಯತ ಆಡಳಿತದ ಸಾಧಕ ಬಾಧಕಗಳು

ಪಂಚಾಯತ ಆಡಳಿತದಿಂದ ಸಾಧಿಸಬಹುದಾದ ಒಳ್ಳೆಯ ಗುಣಗಳು ಈ ಕೆಳಗಿನಂತಿವೆ.

೧. ಹಳ್ಳಿಗಾಡಿನ ಜನತೆಗೆ ತನ್ನ ತನದ ಬಗೆಗೆ ವಿಚಾರಿಸಲು. ಕಾರ್ಯಪ್ರವೃತ್ತರಾಗಲು. ಅಭಿವೃದ್ಧಿ ಹೊಂದಲು ಪಂಚಾಯತ ಆಡಳಿತವು ಒಳ್ಳೆಯ ಅವಕಾಶ ಒದಗಿಸುವದು. ಸ್ಥಾನಿಕ ಸಮಸ್ಯೆಗಳನ್ನು ಸ್ಥಾನಿಕ ಮುಖಂಡರುಗಳು ಸ್ಥಾನಿಕ ದಲ್ಲಿಯೇ ಬಗೆಹರಿಸಲು ಅನುಕೂಲವಾಗುವದು. ಹಳ್ಳಿಗಾಡಿನ ಜನತೆಗೆ ಹಾಗೂ ಮುಖಂಡರಿಗೆ ಪ್ರಜಾಪ್ರಭುತ್ವ. ಸ್ವರಾಜ್ಯ ಆಡಳಿತ. ಸರಕಾರ ಮತ್ತು ರಾಜ್ಯದ ಬಗೆಗೆ ತಿಳುವಳಿಕೆ, ಶಿಕ್ಷಣ

ಹಾಗೂ ತರಬೇತಿಯನ್ನು ನೀಡುವದು. ಜನತೆಯಲ್ಲಿ ರಾಜಕೀಯ ಪ್ರಜ್ಞೆಯನ್ನು ಬೆಳೆಸಿ ಅವರನ್ನು ದೇಶದ ಅಭಿವೃದ್ಧಿಯತ್ತ ಕಾರ್ಯೋನ್ಮುಖರನ್ನಾಗಿ ಮಾಡಲು ಅನುಕೂಲವಾಗುವದು. ಮಹಾತ್ಮಾ ಗಾಂಧಿ, ಜಯಪ್ರಕಾಶ ನಾರಾಯಣರವರ ರಾಮರಾಜ್ಯ, ಗ್ರಾಮರಾಜ್ಯ, ಕಲ್ಯಾಣ ರಾಜ್ಯಗಳ ಕನಸುಗಳನ್ನು ನನಸಾಗಿಸಲು ಇದು ಒಳ್ಳೆಯ ಮಾರ್ಗ. ಪಕ್ಷಗಳ ರಾಜಕಾರಣ, ಚುನಾವಣಾ ವಿಧಾನಗಳು, ಜನತೆಯನ್ನು ಸದಾ ಎಚ್ಚರದಿಂದಿಡುವವು. ಹಕ್ಕುಬಾಧ್ಯತೆಗಳ ಅರಿವು, ಸಂವಿಧಾನದ ಕಲ್ಪನೆ ಮುಂತಾದ ರಾಜಕೀಯ ವಿಷಯಗಳು ಜನತೆಗೆ ಮನದಟ್ಟಾಗುವವು. ಸ್ವಾತಂತ್ರ್ಯ, ಸಮಾನತೆ, ಮತ್ತು ಸಹಬಂಧುತ್ವಗಳ ಪ್ರಾಮುಖ್ಯತೆ ಜನತೆಗೆ ತಿಳಿಯುವುದು.

೩. ಆರ್ಥಿಕವಾಗಿ ಗ್ರಾಮಗಳು, ತಾಲೂಕುಗಳು ಹಾಗೂ ಜಿಲ್ಲೆಗಳು ಅಭಿವೃದ್ಧಿ ಹೊಂದಲು ಅನುವು ದೊರೆಯುವದು ರಸ್ತೆ, ನೀರು, ಬೆಳಕು, ಸ್ವಚ್ಛತೆಗಳು–ಗ್ರಾಮಗಳಿಗೂ ಬರುವವು. ನೀರಾವರಿ, ಒಕ್ಕಲುತನ,ಪಶುಸಂಗೋಪನ ಮುಂತಾದ ಹಳ್ಳಿಗಾಡಿನ ವಿಷಯಗಳು. ಗೃಹ ಕೈಗಾರಿಕೆಗಳು ಯೋಜನೆಗಳಲ್ಲಿ ಪ್ರಾಮುಖ್ಯತೆ ಪಡೆಯುವವು. ಪರಿಶಿಷ್ಟ ಜಾತಿ, ಜನಾಂಗ, ಹಿಂದುಳಿದವರು. ಮಕ್ಕಳು ಹಾಗೂ ಹೆಣ್ಣುಮಕ್ಕಳ ವಿಕಾಸಕ್ಕಾಗಿ ಯೋಜನೆಗಳನ್ನು ಹಮ್ಮಿಕೊಳ್ಳಲು ಅನುಕೂಲವಾಗುವದು. ಶಹರದ ಅನುಕೂಲತೆಗಳನ್ನು ಹಳ್ಳಿಗಳಲ್ಲಿಯೇ ಒದಗಿಸಿದರೆ ಹಳ್ಳಿಯಿಂದ ಶಹರಗಳಿಗೆ ಒಲಸೆ ಹೋಗುವದು ನಿಲ್ಲುವುದಲ್ಲದೆ ಶಹರದಲ್ಲಿ ಜನತಾ ಒತ್ತ

ಡವು ಕಡಿಮೆಯಾಗಿ ಅವುಗಳ ಆಡಳಿತವು ಸುಗಮವಾಗುವದು. ಶಹರದಿಂದುಂಟಾಗುವ ಹಳ್ಳಿಗಳ ಶೋಷಣೆಯನ್ನು ತಡೆಯು ಬಹುದು. ಸಹಕಾರಿ ಸಂಘ, ಬ್ಯಾಂಕಿನ ಸೌಲಭ್ಯ. ವ್ಯಾಪಾ ರೋದ್ಯಮಗಳು ಹಳ್ಳಿಗಳಿಗೂ ತಲುಪಲು ಅನುಕೂಲವಾಗು ವದು. ದವಾಖಾನೆ, ಔಷಧಗಳ ಅನುಕೂಲತೆಗಳು ಹಳ್ಳಿಗಾಡಿನ ಜನತೆಯ ಆರೋಗ್ಯ ಕಾಪಾಡಲು ಸ್ಥಾನಿಕವಾಗಿ ಲಭಿಸುವವು.

೩. ಸಾಮಾಜಿಕವಾಗಿ ಸಹಕಾರ, ಸಹಬಂಧುತ್ವ. ಸಮಾ ನತೆ, ಸ್ವಾತಂತ್ರ್ಯಗಳು ಹಳ್ಳಿಗಾಡಿನ ಜನತೆಗೂ ಲಭಿಸುವವು. ಒಟ್ಟಿನಲ್ಲಿ ಸಮುದಾಯದ ಏಳ್ಗೆಯು ಪಂಚಾಯತ ಆಡಳಿತದ ಗುರಿ.

೪. ಶೈಕ್ಷಣಿಕವಾಗಿ ಪ್ರಾಥಮಿಕ, ಮಾಧ್ಯಮಿಕ ಹಾಗೂ ವಯಸ್ಕರ ಶಿಕ್ಷಣದ ಬಗೆಗೆ ಸ್ಥಾನಿಕರು ಎಚ್ಚತ್ತು ಅವನ್ನು ಸರಿ ಯಾಗಿ ನಿರ್ವಹಿಸಲು ಅನುಕೂಲವಾಗುವದು. ಹಳ್ಳಿಗಾಡಿನ ಸಾಂಸ್ಕೃತಿಕ ಚಟುವಟಿಕೆಗಳು, ಸಾಹಿತ್ಯ. ಕಲಾಕಾರರು ಬೆಳಕಿಗೆ ಬರುವರು.

೫. ಹಳ್ಳಿಗಾಡಿನ ಮುಖಂಡರುಗಳು ಗ್ರಾಮಸಭೆಯಿಂದ ಲೋಕಸಭೆಯವರೆಗೆ ತಮ್ಮ ಗುರಿಯಿಡಲು ಈ ಪಂಚಾಯತ ಆಡಳಿತವು ಶಿಕ್ಷಣ ಹಾಗೂ ತರಬೇತು ನೀಡುವುದು. ಮನೆ ಗೆದ್ದು ಮಾರುಗೆದೆಯಲು ಹಳ್ಳಿಗಾಡಿನ ಜನತೆಗೆ ಮನೋ ಧೈರ್ಯ, ಸ್ಥೈರ್ಯ ನೀಡುವದು. ಅವರ ಕೀಳರಿಮೆಯನ್ನು ನಿವಾರಿಸುವತ್ತ ಈ ಆಡಳಿತ ಉಪಯುಕ್ತವಾಗಿದೆ. ಆಡಳಿತ ವರ್ಗವು ಹೆಚ್ಚು ಚುರುಕಾಗುವದು. ಸ್ಥಾನಿಕ ಮುಖಂಡರುಗಳ

ಕೆಳಗೆ ಸ್ಥಾನಿಕ ಆಡಳಿತವು ಚಲುವಾಗಿ ಕಾರ್ಯ ಮಾಡಬೇಕಾಗುವದು.

ಪಂಚಾಯತ ಆಡಳಿತಕ್ಕೆ ಈ ಕೆಳಗಿನ ಬಾಧಕಗಳೂ ಇವೆ.

೧. ಇಲ್ಲಿಯವರೆಗೆ ಪ್ರಕೃತಿಯ ಶಾಂತ ಮಡಿಲಿನಲ್ಲಿ ಹಾಯಾಗಿದ್ದ ಹಳ್ಳಿಗಳು ರಾಜಕಾರಣದ, ರಾಜಕೀಯ ಪಕ್ಷಗಳ ರಾಜಕೀಯ ಮುಖಂಡರುಗಳ ಹಾಗೂ ಚುನಾವಣೆಗಳ ಸದ್ದು, ಗದ್ದಲದಲ್ಲಿ ಕಕ್ಕಾಬಿಕ್ಕಿಯಾಗುವವು. ಪೈಪೋಟಿ, ಪಂಗಡಗಳಲ್ಲಿ ಸಿಕ್ಕು ನುಗ್ಗುಗಬಹುದು. ಕೊಲೆ ಸುಲಿಗೆಗಳು ಮುಂತಾದ ಅನಾಹುತಗಳಿಗೂ ಎಡೆಯಾಗಬಹುದು. ಚುನಾವಣೆಗಳೆಂದರೆ ಗುಂಪುಗಾರಿಕೆ, ಜಾತೀಯತೆ ಹಾಗೂ ಹಣ, ಹೆಣ್ಣು, ಶರೆಗಳ ದುಂದುಗಾರಿಕೆ, ಎನ್ನುವಂತಾಗಿವೆ.

೨. ಲಂಚ, ರುಸುವತ್ತುಗಳ ಜಾಲ ಗ್ರಾಮಗಳವರೆಗೂ ಮತ್ತಷ್ಟು ಹಬ್ಬಿ, ಭದ್ರವಾಗಿ ತಳವೂರಬಹುದು. ಮೇಲಿನ ರಾಜಕಾರಣಿಗಳು ತಮ್ಮ ಕೆಳಗಿನವರನ್ನು, ಮೇಲಾಧಿಕಾರಿಗಳು ತಮ್ಮ ಕೆಳಗಿನವರನ್ನು ಶೋಷಣೆ ಮಾಡಲು ಅನುಕೂಲವಾಗುವದು. ಪಾರ್ಟಿ ಫಂಡಿನ ಬೇರು ಗ್ರಾಮಕ್ಕೂ ಇಳಿದು ಅವನ್ನು ಅಭದ್ರಗೊಳಿಸುವವು. ಒಮ್ಮೆ ಆಯ್ಕೆಯಾದ ರಾಜಕಾರಣಿಯು ತನ್ನ ಅಭಿವೃದ್ಧಿಯತ್ತ ಒತ್ತುಕೊಟ್ಟು, ಮತ್ತೆ ಮುಂದಿನ ಚುನಾವಣೆಗೆ ಸಂಗ್ರಹಿಸಿ ಸನ್ನದ್ಧನಾಗುವನು. ನೌಕರಿ ಕೊಡುವ, ಕೊಡಿಸುವ, ಪಡೆಯುವ ಜಾಲಗಳು ಶಹರಗಳಿಂದ ಹಳ್ಳಿಗಳಿಗೂ ಇಳಿಯುವವು.

೩. ಧಾರ್ಮಿಕವಾಗಿ, ನೈತಿಕವಾಗಿ ಸಮೃದ್ಧಿಯಿಂದ ಇದ್ದ ಹಳ್ಳಿಯ ಮುಗ್ಧರು ಇನ್ನು ಮುಂದೆ 'ರಾಜಕಾರಣಿ'ಗಳಾಗುವರು– ಎಲ್ಲ ರೀತಿಯಿಂದಲೂ.

೪. ಆರ್ಥಿಕವಾಗಿ ಸಬಲವಲ್ಲದ ಈ ಪಂಚಾಯತ ಆಡಳಿತವು ಸರಕಾರದ ಬಾಗಿಲಿನ ಮುಂದೆ ಸದಾ ಭಿಕ್ಷುಕನಾಗಿ ನಿಲ್ಲುವದು.

೫. ರಾಜಕಾರಣಿಗಳು ಶಿಕ್ಷಣದಲ್ಲಿ ಕೈಹಾಕುವುದಂತೂ ಹೆಚ್ಚು ಅಪಾಯ. ಶಿಕ್ಷಕರು ರಾಜಕಾರಣಿಗಳ ಗುಲಾಮರಾಗಬೇಕಾಗುವದು. ಅದು ಸಮಾಜಕ್ಕೆ ಅವಹೇಳನ. ಗುರು ಲಘುವಾಗಬೇಕಾಗುವದು ತನ್ನ ಜೀವಿತಕ್ಕಾಗಿ.

೬. ಅಶಿಕ್ಷಿತರ. ಅಜ್ಞರ ಹಾಗೂ ಜಾತಿವಾದಿಗಳ ಕೈಯಲ್ಲಿ ಆಡಳಿತವು ತನ್ನ ನೈಪುಣ್ಯತೆಯನ್ನು ಕಳೆದುಕೊಳ್ಳುವುದು. ಆಡಳಿತ ಅಭದ್ರವಾಗುವದು.

೭. ನ್ಯಾಯಾಲಯಗಳಿಗೆ ಮತ್ತಷ್ಟು ಕಾರ್ಯದ ಭಾರ ಬೀಳುವುದು. ಹಳ್ಳಿಗಾಡು ಕೋರ್ಟು. ಕಚೇರಿಗಳಿಗೆ ಎಡತಾಕಿ ಸಣ್ಣಗಾಗುವುದು. ರಾಜಕಾರಣಿಗಳು. ವಕೀಲರು. ಅಧಿಕಾರಿಗಳು. ಪೋಲೀಸರಿಗೆ ಕಾರ್ಯವೂ ಹೆಚ್ಚು ಹಾಗೂ ಆದಾಯವೂ ಹೆಚ್ಚು. ಆದರೆ ಸಾಮಾನ್ಯ ಜನತೆಯ ನೆಮ್ಮದಿ ಮಾತ್ರ ಶೂನ್ಯ.

೮. ಮಂಡಳ ಪಂಚಾಯತಗಳಿಗೆ ಹೆಚ್ಚಾಗಿ ಅವಿರೋಧವಾಗಿ ಆಯ್ಕೆಯಾಗುವರು.

ಬಾಧಕಗಳಿವೆ ಎಂದು ಪಂಚಾಯತ ಆಡಳಿತ ಬಿಡಲು ಬರುವದಿಲ್ಲ. ಆ ಬಾಧಕಗಳನ್ನು ನಿವಾರಿಸುವತ್ತ, ಆಡಳಿತವನ್ನು ಸುಗಮಗೊಳಿಸುವತ್ತ ಕೆಲ ಸೂಚನೆಗಳನ್ನು ಕೊಡಬಹುದು.

೧. ಪಂಚಾಯತ ಆಡಳಿತದಲ್ಲಿ ಪಕ್ಷಗಳು ಕೈಹಾಕಬಾರದಿತ್ತು. ಪಕ್ಷಾತೀತ. ಜಾತ್ಯಾತೀತ ಆಡಳಿತಕ್ಕೆ ಅನುವು ಮಾಡಿಕೊಟ್ಟರೆ ಒಳಿತು. ಭಾರತದ ಗ್ರಾಮಪಂಚಾಯತಗಳು ಪ್ರಾಚೀನ ಕಾಲದಿಂದಲೂ ಈ ತತ್ವವನ್ನು ಅನುಸರಿಸಿದ್ದವು. ಪಕ್ಷರಹಿತ ಪ್ರಜಾಪ್ರಭುತ್ವವು ಪಂಚಾಯತಕ್ಕೆ ಹೆಚ್ಚು ಅನುಕೂಲ

೨. ಗುಣ. ಶೀಲ. ಶಿಕ್ಷಣ. ನೀತಿಗಳನ್ನು ನೋಡಿ ತಮ್ಮ ಮುಖಂಡರುಗಳನ್ನು ಆಯ್ಕೆಮಾಡಲು ಜನತೆಗೆ ಪಕ್ಷಾತೀತ ಪ್ರಜಾಪ್ರಭುತ್ವವು ಹೆಚ್ಚು ಅನುಕೂಲ. ಇಲ್ಲದಿದ್ದರೆ ಪಕ್ಷಗಳು ಹೇರಿದ ಅಭ್ಯರ್ಥಿಗಳಲ್ಲಿ ಒಬ್ಬರನ್ನು ಆಯ್ಕೆಮಾಡುವ ಇಕ್ಕಟ್ಟಿನಲ್ಲಿ ಮತದಾರರು ಸಿಲುಕುವರು. ಪಕ್ಷಗಳು ಗುಣಕ್ಕಿಂತ ಹಣಕ್ಕೆ, ನೀತಿಗಿಂತ ಜಾತಿಗೆ ಮಹತ್ವ ಕೊಡುತ್ತ ಬಂದಿರುವುದರಿಂದಲೇ ಸಮಾಜವು ಹದಗೆಟ್ಟಿರುವುದು.

೩. ಆಡಳಿತ ವರ್ಗ ನೀತಿಯುತವೂ. ನೈಪುಣ್ಯಯುತವೂ ಆಗಿರಬೇಕು. ರೆವೆನ್ಯೂ. ಪೋಲೀಸ. ಶಿಕ್ಷಣರಂಗಗಳು ಸುಧಾರಿಸಿದರೆ ಹಳ್ಳಿಗಾಡು ಅಷ್ಟೇ ಏಕೆ ಇಡೀ ನಾಡು ಸುಧಾರಿಸುವದು.

೪. ಪಂಚಾಯತ ಆಡಳಿತಕ್ಕೆ ನಿಜವಾದ ಸ್ವಾಯತ್ತತೆ ಇರಬೇಕು. ಆರ್ಥಿಕ ಭದ್ರತೆ ಇರಬೇಕು.

೫. ಮಂಡಳ ಪಂಚಾಯತ, ಜಿಲ್ಲಾ ಪರಿಷತ್ತುಗಳ ಸದಸ್ಯರಿಗೆ ಪಗಾರ, ಭತ್ತೆ. ಮುಂತಾದ ಸೌಕರ್ಯಗಳನ್ನು ಒದಗಿಸಬೇಕು.

## ೮. ಅನುಬಂಧ-೧[೨೪]

ಧಾರವಾಡ ಜಿಲ್ಲೆಯ ತಾಲೂಕುವಾರ ಒಟ್ಟು ಮಂಡಳ ಪಂಚಾಯತಗಳು

| | | |
|---|---|---|
| ಧಾರವಾಡ-೧೨ | ಹುಬ್ಬಳ್ಳಿ-೮ | ಕಲಘಟಗಿ-೮ |
| ನವಲಗುಂದ-೮ | ಗದಗ-೧೦ | ರೋಣ-೧೧ |
| ನರಗುಂದ-೪ | ಮುಂಡರಗಿ-೬ | ಹಾವೇರಿ-೧೩ |
| ಬ್ಯಾಡಗಿ-೬ | ಹಿರೇಕೆರೂರ-೧೨ | ರಾಣೆಬೆನ್ನೂರು-೧೨ |
| ಸವಣೂರು-೬ | ಶಿಗ್ಗಾವಿ-೮ | ಕುಂದಗೋಳ-೯ |
| ಹಾನಗಲ್ಲ-೧೨ | ಶಿರಹಟ್ಟಿ-೮ | |

ಧಾರವಾಡ ಜಿಲ್ಲೆಯಲ್ಲಿ ಒಟ್ಟು ಮಂಡಳ ಪಂಚಾಯತಗಳು-೧೫೩.

ಧಾರವಾಡ ಜಿಲ್ಲೆಯ ಎಲ್ಲ ಮಂಡಳ ಪಂಚಾಯತಗಳ ಒಟ್ಟು ಸದಸ್ಯರು-೩೮೯೬.

ಇದರಲ್ಲಿ ಮಹಿಳೆಯರಿಗೆ ಒಟ್ಟು ಸ್ಥಾನಗಳು-೧೦೩೭.

ಪರಿಶಿಷ್ಟ ಜಾತಿ ಮತ್ತು ಜನಾಂಗಕ್ಕೆ ಮೀಸಲಾದ ಒಟ್ಟು ಸ್ಥಾನಗಳು-೮೫೬.

---

೨೪ ಸಂಯುಕ್ತ ಕರ್ನಾಟಕ, ೧೬-೧೧-೮೬.

ಧಾರವಾಡ ಜಿಲ್ಲೆಯಲ್ಲಿ ಒಟ್ಟು ಗ್ರಾಮಗಳು–೧೩೨೫.
ಅವುಗಳ ಒಟ್ಟು ಜನಸಂಖ್ಯೆ–೧೯,೦೯,೭೪೦.
ಇದರಲ್ಲಿ ಒಟ್ಟು ಮಹಿಳೆಯರು–೯,೩೪,೮೯೪.
ಒಟ್ಟು ಪರಿಶಿಷ್ಟ ಜಾತಿ ಮತ್ತು ಜನಾಂಗದವರು–೩,೨೩,೭೩೮

## ಅನುಬಂಧ-೨

ಜಿಲ್ಲಾ ಪರಿಷತ್ ಪ್ರಥಮ ಚುನಾವಣೆ ೨–೧–೧೯೮೭.
ಬೆಂಗಳೂರು ನಗರ ಬಿಟ್ಟು ಉಳಿದ ೧೯ ಜಿಲ್ಲೆಗಳು.
ಸುಮಾರು ೧೮೦ ಲಕ್ಷ ಮತದಾರರು.
ಜಿಲ್ಲಾ ಪರಿಷತ್ತುಗಳ ಒಟ್ಟು ಸ್ಥಾನಗಳು–೮೮೭.
ಪ್ರತಿ ಜಿಲ್ಲಾ ಪರಿಷತ್ತಿನ ಒಟ್ಟು ಸ್ಥಾನಗಳು:

ಧಾರವಾಡ ಜಿಲ್ಲೆ–೬೮: ಬೆಳಗಾಂವ ಜಿಲ್ಲೆ–೭೩: ಉತ್ತರ ಕನ್ನಡ ಜಿಲ್ಲೆ–೨೯: ದಕ್ಷಿಣ ಕನ್ನಡ ಜಿಲ್ಲೆ–೫೯: ಶಿವಮೊಗ್ಗ ಜಿಲ್ಲೆ–೪೧: ವಿಜಾಪುರ ಜಿಲ್ಲೆ–೬೨; ಚಿತ್ರದುರ್ಗ ಜಿಲ್ಲೆ–೩೯ (ಚಳ್ಳಕೆರೆ ತಾಲೂಕು ಬಿಟ್ಟು): ಬೀದರ ಜಿಲ್ಲೆ–೨೯; (ಬೀದರ, ಭಾಲ್ಕಿ ತಾಲೂಕು ಬಿಟ್ಟು); ಕೊಡಗು ಜಿಲ್ಲೆ–೩೧: ಚಿಕ್ಕಮಗಳೂರು ಜಿಲ್ಲೆ–೨೫: ಮೈಸೂರು ಜಿಲ್ಲೆ–೬೪; ಬಳ್ಳಾರಿ ಜಿಲ್ಲೆ–೩೩: ಕೋಲಾರ ಜಿಲ್ಲೆ–೪೯: ಹಾಸನ ಜಿಲ್ಲೆ–೩೮.

ಶ್ರೀಮತಿ ಜ್ಯೋತಿರಾಜು ರಾಜಗೋಪಾಲ ರೆಡ್ಡಿ, ಗೌರಿಬಿದನೂರು ತಾಲೂಕು ವಿದುರಾಶ್ವಥದ ಮಹಿಳಾ ಮೀಸಲು ಕ್ಷೇತ್ರದಿಂದ ಪ್ರಥಮವಾಗಿ ಜನತಾದಿಂದ ಅವಿರೋಧ ಆಯ್ಕೆ.

## ಅನುಬಂಧ-೩

ಧಾರವಾಡ ಜಿಲ್ಲೆಯ ತಾಲೂಕುವಾರು ಜಿಲ್ಲಾ ಪರಿಷತ್ತಿನ ಒಟ್ಟು ಸ್ಥಾನಗಳು ಹಾಗೂ ಮತಕ್ಷೇತ್ರಗಳು :

| | | |
|---|---|---|
| ಕಲಘಟಗಿ ತಾಲೂಕು | ೩ | ಬೊಮ್ಮಿಗಟ್ಟಿ, ತಬಕದ ಹೊನ್ನಿಹಳ್ಳಿ, ಗಳಗಿ. |
| ನವಲಗುಂದ ತಾಲೂಕು | ೪ | ಮೊರಬ, ಅಳಗವಾಡಿ. ನೆಲವಡಿ, ಶಲವಡಿ. |
| ರೋಣ ತಾಲೂಕು | ೫ | ನಿಡಗುಂದ, ಹೊಳೆಆಲೂರು ಅಬ್ಬಿಗೇರಿ, ಸೂಡಿ, ಬೆಳವಣಿಕಿ |
| ನರಗುಂದ ತಾಲೂಕು | ೨ | ಕೊಣ್ಣೂರು, ಚಿಕ್ಕನರಗುಂದ. |
| ಮುಂಡರಗಿ ತಾಲೂಕು | ೩ | ಆಲೂರು, ಡಂಬಳ, ಕಲಕೇರಿ. |
| ಬ್ಯಾಡಗಿ ತಾಲೂಕು | ೩ | ಸಿಡೇನೂರು, ಕಾಗಿನೆಲ್ಲಿ. ಮೋಟೆಬೆನ್ನೂರು. |
| ಸವಣೂರು ತಾಲೂಕು | ೩ | ಕಾರಡಗಿ, ಹತ್ತಿಮತ್ತೂರು, ಕಡಕೋಳ. |
| ಶಿರಹಟ್ಟಿ ತಾಲೂಕು | ೪ | ಶಿರಹಟ್ಟಿ, ಬೆಳ್ಳಟ್ಟಿ, ಹೆಬ್ಬಾಳ, ಶಿಗ್ಲಿ. |
| ರಾಣೆಬೆನ್ನೂರು ತಾಲೂಕು | ೫ | ಗುಡ್ಡಗಾಡಪುರ, ಹಲಗೇರಿ, ಕುಪ್ಪೇಲೂರು, ಇಟಗಿ, ಮೆಡ್ಲೇರಿ. |
| ಶಿಗ್ಗಾಂವ ತಾಲೂಕು | ೪ | ತಡಸ, ಹುಲಗೂರು, ದುಂಡಶಿ, ಶಹಾಬಜಾರ. |

| | | |
|---|---|---|
| ಹಾನಗಲ್ಲ ತಾಲೂಕು | ೫ | ಬಮ್ಮನಹಳ್ಳಿ, ಹಿರೂರ, ತಿಳವಳ್ಳಿ, ಅಕ್ಕಿಆಲೂರು, ಆಡೂರು. |
| ಹಿರೇಕೆರೂರು ತಾಲೂಕು | ೬ | ಹಿರೇಕೆರೂರು, ಮಾಸೂರು, ಕೋಡ, ರಟ್ಟಿಹಳ್ಳಿ, ಚಿಕ್ಕಬ್ಬಾರ, ಹಂಸಬಾವಿ. |
| ಧಾರವಾಡ ತಾಲೂಕು | ೫ | ನಿಗದಿ, ಕೋಟೂರು, ಗರಗ, ಉಪ್ಪಿನಬೆಟಗೇರಿ,ಅಮ್ಮಿನಬಾವಿ |
| ಹಾವೇರಿ ತಾಲೂಕು | ೫ | ದೇವಗಿರಿ, ಕಬ್ಬೂರು, ಅಗಡಿ, ನೆಗಳೂರು, ಗುತ್ತಲ. |
| ಗದಗ ತಾಲೂಕು | ೪ | ಕುರ್ತಕೋಟಿ, ಹೊಂಬಳ, ಸೊರಟೂರು, ಲಕ್ಕುಂಡಿ. |
| ಕುಂದಗೋಳ ತಾಲೂಕು | ೪ | ಇಂಗಳಗಿ, ಸಂಶಿ, ಗುಡಗೇರಿ, ಯರಗುಪ್ಪಿ. |

ಧಾರವಾಡ ಜಿಲ್ಲಾ ಪರಿಷತ್ತಿನ ಒಟ್ಟು ಸ್ಥಾನಗಳು–೭೮
ಮಹಿಳೆಯರಿಗೆ ಮೀಸಲು ಸ್ಥಾನಗಳು–೧೭.
ಪರಿಶಿಷ್ಟ ಜಾತಿ, ಜನಾಂಗಗಳಿಗೆ ಮೀಸಲು ಸ್ಥಾನಗಳು–೧೨.

## ಅನುಬಂಧ-೪

ವಿಜಾಪುರ ಜಿಲ್ಲಾ ಪರಿಷತ್ತಿನ ತಾಲೂಕುವಾರು ಒಟ್ಟು ಸ್ಥಾನಗಳು.

ಇಂಡಿ–೮; ಸಿಂದಗಿ–೨; ಬಸವನಬಾಗೇವಾಡಿ–೭; ವಿಜಾಪೂರ–೮; ಜಮಖಂಡಿ–೫; ಬೀಳಗಿ–೩; ಬಾಗಿಲುಕೋಟೆ–೪; ಮುದ್ದೇಬಿಹಾಳ–೫; ಹುನಗುಂದ–೬; ಬಾದಾವಿ ... ಮುಧೋಳ–೪.

## ಅನುಬಂಧ-೫

ಜಿಲ್ಲಾ ಪರಿಷತ್ತುಗಳ ಪ್ರಥಮ ಚುನಾವಣಾ ನಂತರದ
ಪಕ್ಷಗಳ ಬಲಾಬಲ

ಒಟ್ಟು ಸ್ಥಾನಗಳು — ೮೮೭

| | | |
|---|---|---|
| ಜನತಾ ಪಕ್ಷ | — | ೪೫೦ |
| ಕಾಂಗ್ರೆಸ್ (ಐ) | — | ೩೯೫ |
| ಪಕ್ಷೇತರರು | — | ೨೧ |
| ಎಂ.ಇ.ಎಸ್. | — | ೮ |
| ಭಾ.ಜ.ಪ. | — | ೬ |
| ಕೆ.ಪಿ.ಸಿ.ಸಿ. (ಐಜಿ) | — | ೨ |
| ಸಿ.ಪಿ.ಎಂ. | — | ೧ |
| ಸಿ.ಪಿ.ಐ. | — | ೧ |
| ರಾಜ್ಯ ರೈತ ಸಂಘ | — | ೧ |

(ಒಂದು ಕ್ಷೇತ್ರದಲ್ಲಿ ಚುನಾವಣೆ ಮುಂದೂಡಲಾಗಿದೆ).

## ಅನಬಂಧ-೬[೨೫]

ಮಂಡಳ ಪಂಚಾಯತಗಳಿಗೆ ಪ್ರಥಮ ಚುನಾವಣೆ ೨೦-೧-೧೯೮೭

| | | |
|---|---|---|
| ೧೯ ಜಿಲ್ಲೆಗಳಲ್ಲಿಯ ಒಟ್ಟು ಮಂಡಲ ಪಂಚಾಯತಗಳು | – | ೨೪೬೯ |
| ಈ ಎಲ್ಲ ಮಂಡಲ ಪಂಚಾಯತಗಳ ಒಟ್ಟು ಸದಸ್ಯರು | – | ೫೪೯೧೯ |
| ಅವಿರೋಧವಾಗಿ ಆಯ್ಕೆಯಾದ ಒಟ್ಟು ಸದಸ್ಯರು | – | ೯೬೦೦ |
| —ಇದರಲ್ಲಿ ಜನತಾ ಸದಸ್ಯರು | – | ೫೪೦೦ |
| ಕಾಂಗ್ರೆಸ್ (ಐ) ಸದಸ್ಯರು | – | ೩೦೦೦ |

———

೨೫ ಸಂಯುಕ್ತ ಕರ್ನಾಟಕ, ೧೯-೧-೧೯೮೭

## ಪಕ್ಷಗಳ ಬಲಾಬಲ

| | |
|---|---|
| ಒಟ್ಟು ಮಂಡಳ ಪಂಚಾಯತಗಳು | – ೨೪೬೫ |
| ಪ್ರಕಟಿತ | – ೨೪೪೩ |
| ಜನತಾ | – ೧೩೧೧ |
| ಕಾಂಗ್ರೆಸ್ (ಐ) | – ೬೮೯ |
| ಪಕ್ಷೇತರರು | – ೧೩೯ |
| ಭಾ.ಜ.ಪ. | – ೯ |
| ಸಿ.ಪಿ.ಐ. | – ೨ |
| ಸಿ.ಪಿ.ಎಂ. | – ೧ |
| ಯಾರಿಗೂ ಬಹುಮತ ಇಲ್ಲ | – ೨೯೨ |

---

೨೬ ಸಂಯುಕ್ತ ಕರ್ನಾಟಕ, ೨೨–೧–೧೯೮೭

## ಉಪನ್ಯಾಸ ಗ್ರಂಥಮಾಲೆಯ
## ಕೆಲವು ಪ್ರಕಟನೆಗಳು

೧. ಗ್ರಾಮಾಭ್ಯುದಯದ ಯೋಜನಾಂಗಗಳು

—ಟಿ. ಕೆ. ಮೇಟಿ

೨ ಪ್ರಜಾಪ್ರಭುತ್ವದ ಮೂಲತತ್ವಗಳು

—ಕೆ. ಬಿ. ಬಕ್ಕಪ್ಪ

೩ ಯೋಜನೆಗಳೇಕೆ ಬೇಕು ?

—ಎಸ್. ಎಸ್. ಎಮ್ಮಿ

೪ ಯೋಜನೆಗಳಿಂದ ಕಲಿತ ಪಾಠಗಳು

—ಡಿ. ವೆಂಕಟರಾವ

೫ ಭಾರತ ಆರ್ಥಿಕ ಬೆಳವಣಿಗೆ ಗುಣದೋಷಗಳು

—ಡಿ. ಎ. ಹೆಗಡೆ

೬ ಕರ್ನಾಟಕದಲ್ಲಿ ರಾಷ್ಟ್ರೀಯತೆಯ ಬೆಳವಣಿಗೆ

—ಎನ್. ಎ. ಪಾಟೀಲ

೭ ಹಳ್ಳಿಗಳಲ್ಲಿ ಸಾಲದ ಸೌಲಭ್ಯ ಹಾಗೂ ಅದರ ಸಮಸ್ಯೆಗಳು

—ಎಸ್. ಬಿ. ದುರಗಿ

೮ ಕಲ್ಯಾಣ ರಾಜ್ಯದ ಕಲ್ಪನೆ

—ಆರ್. ವ್ಹಿ. ಹೊರಡಿ

೯ ಸರ್ವೋದಯ ಹಾಗೂ ಜನಕಲ್ಯಾಣ

—ಎಂ. ಎಸ್. ಬಡಕಲಿ

೧೦ ಪ್ರಜಾಪ್ರಭುತ್ವದಲ್ಲಿ ಸ್ವಾತಂತ್ರ್ಯ ಮತ್ತು ಸಮಾನತೆ

—ಹವಾಲದಾರ ಸರೋಜಾದೇವಿ

ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ